ಸ್ವಾಪದೇಶಾರ್ಥ—ರಹಸ್ಯಾರ್ಥ.

ಭಗವದ್ಗುಣಾಮೃತವನ್ನು ವರ್ಷಿಸುವ ಆಚಾರ್ಯರೇ, ಸ್ವಸಂಬಂಧದಿಂದ ಶಿಷ್ಯರಾದ ಸರ್ವರನ್ನೂ ಪರಮಪುರುಷನ ಕಾರುಣ್ಯಕ್ಕೆ ವಿಷಯವಾಗಿ ಮಾಡತಕ್ಕ ನೀವು ದಾಸಭೂತರಾದ ನಮ್ಮನ್ನು ಶಿಷ್ಯಕೋಟಿಯಲ್ಲಿ ಸೇರಿಸಿಕೊಂಡು ತಕ್ಕ ಉಪದೇಶವನ್ನು ಮಾಡುವದರಲ್ಲಿ ಕೊಂಚವೂ ಹಿಂತೆಗೆಯಬೇಡಿರಿ. ಶ್ರೀಮನ್ನಾರಾಯಣನ ದಿವ್ಯಕಲ್ಯಾಣಗುಣಾಮೃತಾಬ್ಧಿಯಲ್ಲಿ ಆಳ್ದು ಮುಳುಗಿ ಅಲ್ಲಿನ ಗುಣವಿಶೇಷಗಳನ್ನೆಲ್ಲಾ ಮುಖಸ್ಥಮಾಡಿಕೊಂಡು ಸಸಂಭ್ರಮವಾಗಿ ಆಚಾರ್ಯಪೀಠದಲ್ಲಿ ನೀವು ಆರೂಢರಾಗಿರಿ. ಸರ್ವೇಶ್ವರನ ದೇಹಕಾಂತಿಯಹಾಗೆ ಕಾರುಣ್ಯವೃಷ್ಟಿಯನ್ನು ಮಾಡುವ ನಿಮ್ಮ ಶರೀರದಲ್ಲಿ ಒಂದು ಕಾಂತಿ ವಿಶೇಷವು ಕಂಗೊಳಿಸಲು, ಧ್ಯಾನಯೋಗದಿಂದ ಭಗವಂತನನ್ನು ನೀವು ಸಾಕ್ಷಾತ್ಕರಿಸಿ ಅನುಭವಿಸುವ ದಿವ್ಯ ವರ್ಚಸ್ಸು ಶ್ರೀಮಹಾವಿಷ್ಣುವಿನ ಚಕ್ರಾಯುಧದಹಾಗೆ ಪ್ರಜ್ವಲಿಸಲಾಗಿ, ಅವನ ವಾಮಹಸ್ತದಲ್ಲಿ ಒಪ್ಪಿರುವ ಶ್ರೀಪಾಂಚಜನ್ಯದಹಾಗೆ ನೀವು ಪ್ರಣವಾರ್ಥವನ್ನು ಸಮಸ್ತರೂ ತಿಳಿಯುವಹಾಗೆ "ತಿರುವಾಯ್ಮೊೞಿ" ಯ ಗ್ರಂಥದಮೂಲಕ ವಿಶದಮಾಡಿ ಕೃಪೆಮಾಡಬೇಕು; ಮತ್ತು ಪ್ರಣವಾರ್ಥ ನಿರೂಪಣದಿಂದ ಎಲ್ಲರೂ ತಮ್ಮ ಶೇಷಶೇಷೀಭಾವವನ್ನು ತಿಳಿದು ಸ್ವರೂಪ ಯಾಥಾತ್ಮ್ಯ ಜ್ಞಾನವನ್ನು ಅಱಿತು ಉಜ್ಜೀವಿಸುವಹಾಗೆ ನೀವು ಭಗವದ್ಗುಣಾಮೃತವನ್ನು ವರ್ಷಿಸಬೇಕು. ಭಗವತ್ಕೈಂಕರ್ಯೈಕಭೋಗಪರರಾದ ನಾವು ಸಂತುಷ್ಟಚಿತ್ತರಾಗಿ ಭಗವದ್ಭಾಗವತೇಷ್ಟತ್ವೇನ ನಿತ್ಯನೈಮಿತ್ತಿಕಕರ್ಮಂಗಳನ್ನು ಯಥಾವಿಧಿಯಾಗಿ ಅನುಷ್ಠಿಸಿಕೊಂಡು ಬರಲು, ಭಗವದ್ಗುಣಾನುಭವವೆಂಬ ಈ ನಮ್ಮ ಅದ್ವಿತೀಯವಾದ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆಱವೇಱುವುದು.

---

O Preceptor, that showers on us the nectar-like blessings of communion with God, please condescend to instruct us, your disciples, freely in the mysteries of God's Glory, so that one and all of your retinue may take refuge with the Almighty God: we entreat you to bring to your mind the many thousand Excellences of the Almighty, after immersing yourself in the unfathomable ocean of His Grace, and cheerfully occupying the high pedestal suitable unto your exalted position of a teacher. At this stage a special kind of effulgence will show itself in your very appearance similar to that of the Almighty, showering kindnesses on all, on whom your glance is directed; and by your holding communion with the Lord through contemplation and enjoying His very Presence and Glory, is engendered a flood of light, which resembles in all respects the effulgence of the great discus that adorns the right hand of the Almighty. You will also be pleased to expound through the Sacred Word *Tiruvoimoḷi* the esoteric meaning of *Praṇava* so distinctly and so well as to be understood by all, similar to the thundering noise produced by the Pânchaganyam, the conch-shell that adorns the left-hand of the Supreme Being; and should shower forth the nectar of God's Glory and Excellence on all, so that they may understand by your teaching the real meaning of the sacred Mantra, and thence the real relationship subsisting between the Lord and our souls (the relationship of *Séshaséshibhâva*=the material and spiritual universe is the body of the Supreme Being), and thus obtain eternal salvation. While we, whose sole aim and end of life consists in rendering devotional service unto the Lord and nothing else, continue to discharge our duties, general and special, enjoined upon us in accordance with the injunctions prescribed by the Lord and our venerable sages, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory and other Excellences.

ಮಾಯನೈಮನ್ನುವಡಮದುರೈಮೈನ್ದನೈ ।
ತೂಯಪೆರುನೀರ್ಯಮುನೈತ್ತುರೈವನೈ ।
ಆಯರ್ಕುಲತ್ತಿನಿಲ್ತೋನ್ರುಮಣಿವಿಳಕ್ಕೈ ।
ತಾಯೈಕ್ಕುಡಲ್ವಿಳಕ್ಕಂಶೆಯ್ದದಾಮೋದರನೈ ॥
ತೂಯೋಮಾಯ್ವನ್ದುನಾಂತೂಮಲರ್ತೂವಿತ್ತೊೞುದು ।
ವಾಯಿನಾಲ್ಪಾಡಿಮನತ್ತಿನಾಲ್ಶಿನ್ದಿಕ್ಕ ।
ಪೋಯಪಿೞೈಯುಂಪುಗುತರುವಾನಿನ್ರನವು ।
ತೀಯಿನಿಲ್ತೂಶಾಕುಂಶೆಪ್ಪೇಲೋರೆಂಬಾವಾಯ್ ॥ ॥೫॥

## ಪ್ರತಿಪದಾರ್ಥ.

ಮಾಯನೈ—ಆಶ್ಚರ್ಯಗುಣಚೇಷ್ಟಿತನಾದ
ಮನ್ನು—ಭಗವತ್ಸಂಬಂಧದಿಂದ ಪ್ರಸಿದ್ಧವಾದ
ವಡಮಧುರೈಮೈನ್ದನೈ—ಉತ್ತರ ಮಧುರಾಪುರಿಯಲ್ಲಿ ಅವತರಿಸಿದಂಥಾವನನ್ನು
ತೂಯಪೆರುನೀರ್—ಪರಿಶುದ್ಧವಾದ ಅಧಿಕಪ್ರವಾಹವುಳ್ಳ
ಯಮುನೈತ್ತುರೈವನೈ—ಯಮುನಾತೀರವಾಸಿಯಾದವನನ್ನು
ಆಯರ್ಕುಲತ್ತಿನಿಲ್—ಶ್ರೀನಂದಗೋಕುಲದಲ್ಲಿ
ತೋನ್ರುಮಣಿವಿಳಕ್ಕೈ—ಬೆಳದುಕೊಂಡಿದ್ದ ಮಣಿದೀಪವನ್ನು
ತಾಯೈಕ್ಕುಡಲ್ವಿಳಕ್ಕಂಶೆಯ್ದ—ದೇವಕೀದೇವಿಯ ಗರ್ಭಾಶಯವನ್ನು ಪ್ರಕಾಶಪಡಿಸಿದ
ದಾಮೋದರನೈ—ಶ್ರೀಕೃಷ್ಣಸ್ವಾಮಿಯನ್ನು
ತೂಯೋಮಾಯ್—ಸ್ನಾನವಾಡಿಕೊಂಡು ಪರಿಶುದ್ಧರಾಗಿ
ವನ್ದುನಾಂ—ನಾವು ಬಂದು
ತೂಯ್ಮಲರ್ಕಳ್—ಪರಿಮಳವಾದ ಪುಷ್ಪಗಳನ್ನು
ತೂಯ್ತೊೞುತು—ದಿವ್ಯಪಾದಂಗಳಲ್ಲಿ ಸಮರ್ಪಿಸಿ ಎರಗಿ
ವಾಯಿನಾಲ್, ಪಾಡಿ—ವಾಚಾ ಅವನನ್ನು ಹೊಗಳಿ
ಮನತ್ತಿನಾಲ್, ಚಿಂತಿಕ್ಕ—ಭಕ್ತಿಪುರಸ್ಸರವಾಗಿ ಧ್ಯಾನಿಸಿದರೆ
ಪೋಯಪಿಶ್ಯೆಯುಂ—ಪೂರ್ವಾರ್ಜಿತಕರ್ಮಗಳೂ
ಪುಕುದರುವಾನಿನ್ರನವುಂ—ಆಗಾಮಿಕರ್ಮಗಳೂ
ತೀಯಿನಿಲ್ತೂಶುಆಕುಂ—ಅಗ್ನಿ ತಗಲಿದ ಪಂಜಿನಹಾಗೆ ಆಗುವುದು
ಶೆಪ್ಪು—ಹೇಳಲಾಗಿ
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು

## ತಾತ್ಪರ್ಯ.

ಎಲೈ ಸಖಿಯರೇ, ಆಶ್ಚರ್ಯಗುಣಚೇಷ್ಟಿತನಾಗಿಯೂ, ಭಗವತ್ಸಂಬಂಧದಿಂದ ಪ್ರಸಿದ್ಧವಾದ ಆ ಉತ್ತರ ಮಧುರಾಪುರಿಯಲ್ಲಿ ಅವತರಿಸಿದಂಥವನಾಗಿಯೂ, ಪರಿಶುದ್ಧೋದಕವುಳ್ಳದ್ದಾಗಿಯೂ ಅಧಿಕ ಪ್ರವಾಹವುಳ್ಳದ್ದಾಗಿಯೂ ಇರುವ ಯಮುನಾನದೀತೀರವಾಸಿಯಾಗಿಯೂ, ಶ್ರೀನಂದಗೋಕುಲದಲ್ಲಿ ಬೆಳದುಕೊಂಡಿದ್ದ ಮಣಿದೀಪಪ್ರಾಯನಾಗಿಯೂ, ದೇವಕೀದೇವಿಯ ಗರ್ಭಾಶಯವನ್ನು ತನ್ನ ದಿವ್ಯ ಜನನದಿಂದ ಪ್ರಕಾಶಪಡಿಸಿದ ಆ ಶ್ರೀವಾಸುದೇವನನ್ನು, ನಾವೆಲ್ಲಾ ಸ್ನಾನಾದಿಕರ್ಮಗಳಿಂದ ಪರಿಶುದ್ಧರಾಗಿ ಪರಿಮಳ ಪುಷ್ಪಗಳಿಂದ ಅರ್ಚಿಸಿ, ವಾಚಾ ಅವನನ್ನು ಹೊಗಳಿ ಭಕ್ತಿಪುರಸ್ಸರವಾಗಿ ಆ ಸರ್ವಸ್ವಾತ್ಮಸ್ವರನನ್ನು ಧ್ಯಾನಿಸಿದರೆ, ನಮ್ಮ ಪೂರ್ವಾರ್ಜಿತ ಪಾಪಕರ್ಮಗಳೂ, ಆಗಾಮಿಯಾದ ದುಷ್ಕರ್ಮಗಳೂ ಬೆಂಕಿತಗಲಿದ ಪಂಜಿನಹಾಗೆ ನಾಶಹೊಂದುವವು. ಹೀಗೆ ನಾವು ಅವನ ದಿವ್ಯನಾಮಂಗಳನ್ನು ಕೊಂಡಾಡಲಾಗಿ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿ ನೆರವೇರುವುದು.

## ಸ್ವಾಪದೇಶಾರ್ಥ—ರಹಸ್ಯಾರ್ಥ.

ಎಲೈ ಭಗವದಭಿಮುಖರಾದ ಚೇತನರೇ, ನಿತ್ಯಸೂರಿಗಳಿಂದಲೂ ಪರಿಭಾವಿಸಿ ಅರಿಯಲು ಅಸಾಧ್ಯವಾದ ಪರತ್ವವುಳ್ಳವನಾಗಿಯೂ, ಭಗವತ್ಸಂಬಂಧವು ಅವಿಚ್ಛಿನ್ನವಾಗಿ ನೆಲೆಗೊಂಡಿರುವ ಶ್ರೀಮಧುರಾಪುರಿಯೇ ಮುಂತಾದ ದಿವ್ಯದೇಶಂಗಳಲ್ಲಿ ನಿತ್ಯವಾಸಮಾಡುವಂಥಾವನಾಗಿಯೂ, ಅವಿಚ್ಛಿನ್ನ ಪರಿಶುದ್ಧ ಜ್ಞಾನಾನಂದಾತಿಶಯ ವಿಶಿಷ್ಟನಾಗಿಯೂ, ಪರಮಭಕ್ತಿಭರಿತರಾದ ಜ್ಞಾನಿಗಳ ಮಧ್ಯದಲ್ಲಿ ಮಣಿದೀಪಪ್ರಾಯನಾಗಿಯೂ, ದೇವಕೀದೇವಿ, ದೇವಹೂತಿ, ಕೌಸಲ್ಯೆ ಮುಂತಾದ ಮಾತೃವರ್ಗಂಗಳಿಗೆ ಅವರವರ ಭಕ್ತಿಗೆ ಪರವಶನಾಗಿ ಸ್ವಸಂಬಂಧಾತಿಶಯದಿಂದ ಜನ್ಮಮರಣಾದಿಸಂಸೃತಿ ದುಃಖವನ್ನು ನಿವೃತ್ತಿಮಾಡಿಸಿ, ಪುನರಾವೃತ್ತಿರಹಿತವಾದ ಶ್ರೀವೈಕುಂಠಪ್ರಾಪ್ತಿಯನ್ನು ಮಾಡಿಸಿದವನಾಗಿಯೂ, ತನ್ನ ಅವಿಚ್ಛಿನ್ನಭಕ್ತರಿಗೆ ಪರಾಧೀನನಾಗಿ ಅವರಿಷ್ಟಕ್ಕೆ ಒಳಪಟ್ಟು ನಾನಾವಿಧವಾದ ಅವಸ್ಥೆಗಳನ್ನೂ ಬಂಧಗಳನ್ನೂ ಕೈಕೊಂಡವನಾಗಿಯೂ, ಇರುವ ಶ್ರೀಮನ್ನಾರಾಯಣನನ್ನು ಅನನ್ಯಪ್ರಯೋಜನರಾದ ನಾವು ಪರಿಶುದ್ಧಾಂತಃಕರಣರಾಗಿ ಬಂದು ಪ್ರೀತಿಪುರಸ್ಸರವಾಗಿ ಅವನ ಚರಣಸನ್ನಿಧಿಯಲ್ಲಿ ನಮ್ಮ ಹೃದಯಕಮಲವನ್ನು ಸಮರ್ಪಿಸಿ ಅವನಿಗೆ ದಾಸಭೂತರಾಗಿ ಊಳಿಯವನ್ನುಮಾಡಿ, ಅವನ ಕಲ್ಯಾಣಗುಣಂಗಳನ್ನು ಸಂಕೀರ್ತನೆಮಾಡಿ, ಅವನ ದಿವ್ಯಮಂಗಳವಿಗ್ರಹವನ್ನು ಏಕಾಗ್ರಚಿತ್ತರಾಗಿ ಧ್ಯಾನಿಸಿದರೆ, ನಮ್ಮ ಪೂರ್ವೋತ್ತರಾಘಂಗಳೆಲ್ಲವೂ ಅಗ್ನಿತಗಲಿದ ಇಷೀಕಾತೂಲದಂತೆ ನಾಶವಾಗುವವು. ಆದಕಾರಣ ಆ ಶ್ರಿಯಃಪತಿಯ ದಿವ್ಯಗುಣಾನುಭವವನ್ನು ನಾವುಗಳು ಮಾಡಲು, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪ ವ್ರತವು ಶುಭವಾಗಿಯೂ ಶ್ಲಾಘ್ಯವಾಗಿಯೂ ನಡೆದಿರುವುದು.

---

Ye souls! whose minds are drawn unto God, if we should, with a pure heart and sincere devotion, approach His august presence, as beings interested in nothing other than God Himself, and offer our humble services to Him Whose greatness, even the eternal denizens of Paradise are not competent to discern, Who has taken residence, so as to be easily accessible to all, in all sacred spots of which northern Madura (Muttra) stands first; Who is full of pure and eternal wisdom and bliss; Who stands as an illustrious guiding Light amidst His zealous devotees; Who graciously condescended to remove the bonds and consequent sufferings of rebirths of His several mothers in different incarnations—Dêvaki, Dêvahuti and Kousalyâ, to whom He was affectionately attached owing to their deep devotion, and to favour them with a seat in Paradise, from which there is no return to this lower region; and Who subjected Himself to many a trial and apparent inconvenience or suffering merely to accede to the wishes and prayers of His devotees. Before such a Being, we shall submissively lay our heart at His feet, and sing hallelujahs in His praise, and contemplate His Divine Appearance with profound concentration of mind. If we do so, all our sins—past and future—would vanish away like bales of cotton touched by a spark of fire.

ಪುಳ್ಳುಂಶಿಲಂಬಿನಕಾಣ್ಪುಳ್ಳರೈಯನ್ಕೋಯಿಲಿಲ್ |
ವೆಳ್ಳೈವಿಳಿಶಙ್ಗಿನ್ಪೇರರವಙ್ಕೇಟ್ಟಿಲೈಯೋ |
ಪಿಳ್ಳಾಯೆೞುನ್ದಿರಾಯ್ಪೇಯ್ಮುಲೈನಞ್ಜುಣ್ಡು |
ಕಳ್ಳಚ್ಚಕಡಙ್ಕಲಕ್ಕೞಿಯಕ್ಕಾಲೋಚ್ಚಿ ||
ವೆಳ್ಳತ್ತರವಿಲ್ತುಯಿಲಮರ್ನ್ದವಿತ್ತಿನೈ |
ಯುಳ್ಳತ್ತುಕ್ಕೊಣ್ಡುಮುನಿವರ್ಗಳುಮ್ಯೋಗಿಕಳುಂ |
ಮೆಳ್ಳವೆೞುನ್ದರಿಯೆನ್ಱಪೇರರವ |
ಮುಳ್ಳಂಪುಕುನ್ದುಕುಳಿರ್ನ್ದೇಲೋರೆಂಪಾವಾಯ್ || || ೬ ||

ಪ್ರತಿಪದಾರ್ಥ.

ಪುಳ್ಳುಂ—ನಾನಾವಿಧ ಪಕ್ಷಿಗಳೂ
ಶಿಲಂಬಿನಕಾಣ್ ಧ್ವನಿಮಾಡುತ್ತಲಿವೆ ನೋಡು
ಪುಳ್ಳರೈಯರ್—ಪಕ್ಷಿರಾಜನಾದ ಗರುಡನಿಗೆ
ಕೋ—ಸ್ವಾಮಿಯಾದ ಶ್ರೀಕೃಷ್ಣನ
ಇಲಿಲ್—ಅರಮನೆಯಲ್ಲಿ, ದಿವ್ಯಸನ್ನಿಧಿಯಲ್ಲಿ
ವೆಳ್ಳೈವಿಳಿಶಙ್ಗಿನ್—ಶುಭ್ರವಾಗಿಯೂ ಸುಂದರವಾಗಿಯೂ ಇರುವ ಶಂಖದ
ಪೇರರವಂ—(ಎಲ್ಲರನ್ನೂ ಕರೆಯುವ ಹಾಗೆ ಧ್ವನಿ ಮಾಡುವ) ಉಚ್ಚಧ್ವಾನವು
ಕೇಟ್ಟಿಲೈಯೋ—ನಿನ್ನ ಕಿವಿಯಲ್ಲಿ ಬೀಳಲಿಲ್ಲವೋ
ಪಿಳ್ಳಾಯ್—ಮುಗ್ಧೆಯೇ
ಎೞುನ್ದಿರಾಯ್—ಹಾಸುಗೆಯನ್ನು ಬಿಟ್ಟು ಏಳು
ಪೇಯ್ಮುಲೈನಞ್ಜುಣ್ಡು—ರಾಕ್ಷಸಿಯಾದ ಪೂತನೆಯ ವಿಷಮಯವಾದ ಹಾಲನ್ನು ಪಾನಮಾಡಿ ಕೊಂದು
ಕಳ್ಳಚ್ಚಕಡಂ—ಮಾಯಾಶಕಟವನ್ನು
ಕಲಕ್ಕೞಿಯ—ಕಟ್ಟುಗಳೆಲ್ಲಾ ನಾಶವಾಗುವಹಾಗೆ
ಕಾಲೋಚ್ಚಿ—ಪಾದದಿಂದ ಒದ್ದು
ವೆಳ್ಳತ್ತು ಅರವಿಲ್—ಬೆಳ್ಳಗಿರುವ ಆದಿಶೇಷನಮೇಲೆ
ತುಯಿಲ್, ಅಮರ್ನ್ದವಿತ್ತಿನೈ—ಯೋಗನಿದ್ರೆಮಾಡಿಕೊಂಡಿರುವ \ ಸಮಸ್ತಕ್ಕೂ ಬೀಜಸ್ವರೂಪನಾದ ಶ್ರೀಮನ್ನಾರಾಯಣನನ್ನು
ಉಳ್ಳತ್ತುಕ್ಕೊಂಡು—ತಮ್ಮ ಮನಸ್ಸಿನಲ್ಲಿ ನೆಲೆಗೊಳ್ಳಿಸಿ
ಮುನಿವರ್ಗಳುಂ, ಯೋಗಿಗಳುಂ—ಮುನಿಗಳೂ ಯೋಗಿಗಳೂ
ಮೆಳ್ಳಎೞುನ್ದು—ಮೆಲ್ಲಗೆ ಎದ್ದು
ಅರಿಯೆನ್ಱ ಪೇರರವಂ—"ಹರಿಃ ಹರಿಃ" ಎಂದು ಹೇಳುವ ಗಟ್ಟಿಯಾದ ಧ್ವನಿಯು
ಉಳ್ಳಂಪುಕುನ್ದು—ಮನಸ್ಸನ್ನು ಪ್ರವೇಶಿಸಿ
ಕುಳಿರ್ನ್ದು—ಆಹ್ಲಾದಕಾರಿಯಾದಕೂಡಲೆ
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು

ತಾತ್ಪರ್ಯ.

ಎಲೈ ಏನೂ ಅರಿಯದ ಬಾಲೆಯೇ, ಪ್ರಾತಃಕಾಲಸೂಚಕವಾಗಿ ನಾನಾವಿಧವಾದ ಪಕ್ಷಿಗಳೂ ಧ್ವನಿಮಾಡುತ್ತಲಿವೆ ನೋಡು. ಪಕ್ಷಿರಾಜನಾದ ಗರುಡನಿಗೆ ಸ್ವಾಮಿಯಾದ ಶ್ರೀಕೃಷ್ಣನ ಅರಮನೆಯಲ್ಲಿ ಶುಭ್ರವಾಗಿಯೂ ಸುಂದರವಾಗಿಯೂ ಇರುವ ಶಂಖದ ದಿವ್ಯಧ್ವಾನವು ನಿನ್ನ ಕಿವಿಯಲ್ಲಿ ಬೀಳಲಿಲ್ಲವೋ. ಜಾಗ್ರತೆಯಿಂದ ಹಾಸುಗೆಯನ್ನು ಬಿಟ್ಟು ಏಳು. ಮಹಾರಾಕ್ಷಸಿಯಾದ ಪೂತನೆಯ ವಿಷಮಯವಾದ ಹಾಲನ್ನು ಪಾನಮಾಡಿ ಅವಳನ್ನು ಕೊಂದು, ವಂಚಕಶಕಟಾಸುರನನ್ನು ನಾಶಮಾಡಿ, ಆದಿಶೇಷನ ದಿವ್ಯಪರ್ಯಂಕದಲ್ಲಿ ಯೋಗನಿದ್ರೆಮಾಡಿಕೊಂಡು ಸಮಸ್ತ ಪದಾರ್ಥಗಳಿಗೂ ಬೀಜಸ್ವರೂಪನಾದ ಶ್ರೀಮನ್ನಾರಾಯಣನನ್ನು ತಮ್ಮ ಮನಸ್ಸಿನಲ್ಲಿ ನೆಲೆಗೊಳ್ಳಿಸಿಕೊಂಡು ತದೇಕಧ್ಯಾನರಾಗಿ ಮೆಲ್ಲಗೆ ಏಳುವ ಮುನಿಗಳೂ ಮತ್ತೂ ಯೋಗಿಗಳೂ "ಹರಿಃ ಹರಿಃ" ಎಂದು ಹೇಳುವ ಗಟ್ಟಿಯಾದ ಧ್ವನಿಯು ಮನಸ್ಸನ್ನು ಪ್ರವೇಶಿಸಿ ಆಹ್ಲಾದಕಾರಿಯಾದ ಕೂಡಲೆ ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿ ನೆರವೇರುವುದು.

## ಸ್ವಾಪದೇಶಾರ್ಥ—ರಹಸ್ಯಾರ್ಥ.

ನೂತನವಾಗಿ ಭಗವತ್ಸಂಬಂಧವನ್ನು ಹೊಂದಿದ ಚೇತನನೇ, ಪರಮ ಸಾತ್ವಿಕರಾದ ಭಾಗವತರು ಭಗವದ್ಗುಣಾನುಸಂಧಾನಪೂರ್ವಕವಾಗಿ ತಂತಮ್ಮ ವರ್ಣಾಶ್ರಮೋಚಿತ ಕರ್ಮಾನುಷ್ಠಾನಂಗಳನ್ನು ಮಾಡಲು ಹೋಗುತ್ತಿರುವರು; ಶ್ರಿಯಃಪತಿಗೆ ವಾಸಸ್ಥಾನವಾದ ಪ್ರಣವದಮಧ್ಯಮಾಕ್ಷರವನ್ನು ಕುರಿತು ಪಾಂಚಜನ್ಯದ ದಿವ್ಯಘೋಷದಂತೆ ಆಚಾರ್ಯರು ಮೊಳೆಯಿಟ್ಟು ಹೇಳುವ ದಿವ್ಯಾರ್ಥಂಗಳನ್ನು ನೀನು ಗಮನಿಸಿ ಕೇಳಲಿಲ್ಲವೋ; ಭಗವದಾರಾಧನ ಕಾಲವು ಸಮೀಪಿಸಿತು; ಏಳು ಮೇಲಕ್ಕೆ. ಪ್ರಕೃತಿಸ್ಥರಾದ ನಮಗೆ ಆ ಸಂಸರ್ಗದಿಂದ ಉಂಟಾದ ಅಹಂಕಾರ ಮಮಕಾರಂಗಳೆರಡನ್ನೂ ನಿವೃತ್ತಿಸಿ, ಕಾಮಕ್ರೋಧಾದಿಗಳನ್ನೂ ಬೇರು ಸಹಿತ ನಾಶಮಾಡಿ ಕೃಪೆಮಾಡುವಂಥಾ, ಶ್ರೀಕ್ಷೀರಾಬ್ಧಿಯಲ್ಲಿ ಶೇಷಶಾಯಿಯಾಗಿ ಬಿಜಯಮಾಡಿರುವ ಶ್ರೀಮನ್ನಾರಾಯಣನನ್ನು ಹೃದಯಕಮಲದಲ್ಲಿಟ್ಟು ಧ್ಯಾನಮಾಡುವ ಗುಣಾನುಭವಪರರೂ ಕೈಂಕರ್ಯಪರರೂ ಜಾಗರೂಕರಾಗಿ ಸಾವಧಾನದೊಡನೆ "ಹರಿಃ ಹರಿಃ" ಎಂದು ಸಂಕೀರ್ತನಮಾಡುವ ದಿವ್ಯಧ್ವನಿಯು ನಮ್ಮಗಳ ಹೃದಯದಲ್ಲಿ ಪ್ರವೇಶಿಸಿ ಪರಮಾಹ್ಲಾದವನ್ನು ಉಂಟುಮಾಡಲು, ನಮ್ಮ ಈ ಅದ್ವಿತೀಯವಾದ ಭಗವದ್ಗುಣಾನುಭವರೂಪವ್ರತವು ಸಾಂಗವಾಗಿಯೂ ಶುಭವಾಗಿಯೂ ನಡೆಯೇರುವುದು.

---

O Revered brother, that has newly been brought into the fold of the righteous! The pious *votaries* of God are going out to attend to their respective daily observances, rites and ceremonies enjoined upon the different classes—such as Brahmins, Kshatriyas, Vaisyas and Sudras, singing hymns of praise dedicated to the Lord. Did you not attentively hear the divine sound of the excellent truth (imbedded in the middle letter of the sacred *Praṇava*, the favourite seat of the Almighty) so loudly proclaimed by the Achâryas? The time to attend divine service is drawing near; hence arise. When the agreeable sound 'Harih' 'Harih', often recited so attentively and piously by Munies and Yogis in the early morn in praise of our Lord Nârâyana, Who has taken His soft bedding on Adisêsha in the milk-ocean, Who graciously uproots the Ahankâra (idea of self) resulting from our connection with Prakriti, and consequently the evil effects resulting from the influence of six enemies i.e. desire, anger, covetousnes, ignorance, ardent passion, hatred—when that agreeable sound enters our heart and cheers us all to do our duty, we shall be in a fair way to bring the special vow to a successful fruition—the vow consisting in our souls' holding communion with the Lord, and in the uninterrupted enjoyment of His Glory, Mercy, and other Excellences.

ಕೀಶುಕೀಶೆನ್ರೆಙ್ಗುಮಾನೈಚ್ಚಾತ್ತನ್ಕಲನ್ದು |
ಪೇಶಿನಪೇಚ್ಚರವಂಕೇಟ್ಟಿಲೈಯೋಪೇಯ್ಪ್ಪೆಣ್ಣೇ |
ಕಾಶುಂಪಿಱಪ್ಪುಙ್ಕಲಕಲಪ್ಪಕ್ಕೈಪೇರ್ತ್ತು |
ವಾಶನಱುಙ್ಕುಟಲಾಯ್ಚ್ಚಿಯರ್ಮತ್ತಿನಾಲ್ ||
ಓಶೈಪಡುತ್ತತಯಿರರವಂಕೇಟ್ಟಿಲೈಯೋ |
ನಾಯಕಪ್ಪೆಣ್ಪಿಳ್ಳಾಯ್ನಾರಾಯಣನ್ಮೂರ್ತ್ತಿ |
ಕೇಶವನೈಪ್ಪಾಡವುಂನೀಕೇಟ್ಟೇಕಿಡತ್ತಿಯೋ |
ತೇಶಮುಡೈಯಾಯ್ತಿಱವೇಲೋರೆಂಬಾವಾಯ್ || ||೭||

## ಪ್ರತಿಪದಾರ್ಥ.

ಕೀಶುಕೀಶೆನ್ರು—ಕೀಚ್ ಕೀಚ್ ಎಂದು
ಎಙ್ಗುಂ, ಆನೈಚ್ಚಾತ್ತಂ—ಎಲ್ಲೆಲ್ಲಿಯೂ ಭಾರದ್ವಾಜ ಪಕ್ಷಿ
ಕಲನ್ದುಪೇಶಿನ—ಕೂಡಿಕೊಂಡು ಉಲಿದ
ಪೇಚ್ಚು, ಅರವಂ—ದೊಡ್ಡ ಧ್ವನಿಯನ್ನು
ಕೇಟ್ಟಿಲೈಯೋ—ನೀನು ಕೇಳಲಿಲ್ಲವೋ
ಪೇಯ್ಪ್ಪೆಣ್ಣೇ—ಬುದ್ಧಿಯಿಲ್ಲದ ಹೆಂಗಸೇ
ಕಾಶುಂಪಿಱಪ್ಪುಂ—ಕಂಠಾಭರಣವಾಗಿರುವ ಕಾಸಿನತಾಲಿಯೂ ಆಮೆಯತಾಲಿಯೂ
ಕಲಕಲಪ್ಪ—ಗಲಗಲವೆಂದು ಶಬ್ದವಾಗುವಹಾಗೆ
ಕೈಪೇರ್ತ್ತು—ಕೈಗಳನ್ನು ನೀಡಿ ಹಿಂತೆಗೆದು
ವಾಶಂ, ನಱುಂ—ವಾಸನೆಯನ್ನು ಬೀಸುವ [ಯರು
ಕುಟಲ್ ಆಯ್ಚ್ಚಿಯರ್—ಕುಂತಲಗಳುಳ್ಳ ಗೋಪಿ
ಮತ್ತಿನಾಲ್—ಮತ್ತಿನಿಂದ
ಓಶೈಪಡುತ್ತ—ಕಡೆದ
ತಯಿರ್ ಅರವಂ—ಮೊಸರಿನ ಶಬ್ದವನ್ನು
ಕೇಟ್ಟಿಲೈಯೋ—ನೀನು ಕೇಳಲಿಲ್ಲವೋ
ನಾಯಕಪ್ಪೆಣ್ಪಿಳ್ಳಾಯ್—ಸ್ತ್ರೀಜನಂಗಳಲ್ಲಿ ಯಜಮಾನಿಯಾದವಳೇ [ಸ್ವರೂಪನಾದ
ನಾರಾಯಣನ್ಮೂರ್ತ್ತಿ—ಶ್ರೀವೈಕುಂಠಪತಿಯ ಸಾಕ್ಷಾತ್
ಕೇಶವನೈ—ಕೇಶಿ ಎಂಬ ರಾಕ್ಷಸನನ್ನು ಕೊಂದ ಶ್ರೀ ಕೃಷ್ಣಸ್ವಾಮಿಯನ್ನು
ಪಾಡವುಂ—ನಾವು ಸ್ತುತಿಸುತ್ತಿರಲು
ನೀಕೇಟ್ಟೇಕಿಡತ್ತಿಯೋ—ಅದನ್ನು ನೀನು ಕೇಳುತ್ತಲೇ ಮಲಗಿದ್ದಿಯೋ
ತೇಶಮುಡೈಯಾಯ್—ಲಾವಣ್ಯವತಿಯೇ
ತಿಱ—ಬಾಗಲನ್ನು ತೆಗೆ
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು

## ತಾತ್ಪರ್ಯ.

ಎಲೈ ಬುದ್ಧಿಯಿಲ್ಲದ ಹೆಂಗಸೇ, ಇನ್ನೂ ಏಕೆ ಮಲಗಿರುವೇ? ಬೇಗ ಏಳು. "ಕೀಚ್ ಕೀಚ್" ಎಂದು ಎಲ್ಲೆಲ್ಲಿಯೂ ಭಾರದ್ವಾಜ ಪಕ್ಷಿಗಳು ಕೂಡಿಕೊಂಡು ಉಲಿಯುವ ದೊಡ್ಡ ಧ್ವನಿಯನ್ನು ನೀನು ಕೇಳಲಿಲ್ಲವೋ ; ಕಂಠಾಭರಣವಾಗಿರುವ ಕಾಸಿನ ತಾಲಿಯೂ ಆಮೆಯ ತಾಲಿಯೂ ಗಲಗಲವೆಂದು ಶಬ್ದವಾಗುವಹಾಗೆ ಕೈಗಳನ್ನು ನೀಡಿ ಹಿಂತೆಗೆದು ಸುವಾಸನೆಯಾದ ಕುಂತಲಗಳುಳ್ಳ ಪದ್ಮಿನೀಜಾತಿಯ ಗೋಪಸ್ತ್ರೀಯರು ಮತ್ತಿನಿಂದ ಕಡೆದ ದಧಿಯ ಶಬ್ದವನ್ನೂ ನೀನು ಕೇಳಲಿಲ್ಲವೋ ; ಸ್ತ್ರೀಜನಂಗಳಿಗೆಲ್ಲಾ ಯಜಮಾನಿಯಾದವಳೇ, ಶ್ರೀ ವೈಕುಂಠಪತಿಯ ಸಾಕ್ಷಾತ್ ಸ್ವರೂಪನಾದ ಶ್ರೀ ಕೃಷ್ಣಸ್ವಾಮಿಯನ್ನು ನಾವು ಕೊಂಡಾಡುತ್ತಿರಲು, ಅಮಾತುಗಳನ್ನು ಕೇಳುತ್ತಲೇ ನೀನು ಮಲಗಿದ್ದೆಯೋ ; ಎಲೈ ಲಾವಣ್ಯವತಿಯೇ, ನೀನು ಬಾಗಲನ್ನು ತೆಗೆದು ನಮ್ಮ ಜೊತೆಯಲ್ಲಿ ಸೇರಲು, ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.



## ಸ್ವಾಪದೇಶಾರ್ಥ—ರಹಸ್ಯಾರ್ಥ.

ಭಗವದ್ವಿಷಯದಲ್ಲಿ ಪರಾಙ್ಮುಖನಾದ ಚೇತನನೇ, ಎಚ್ಚೆತ್ತು ಪ್ರಬುದ್ಧನಾಗು. ಅಹಂಕಾರ ಮಮಕಾರಾದಿಗಳಿಗೆ ಒಳಪಡದ ಪರಮಭಾಗವತರು ಬಹುಕಾಲ ಸಂಶ್ಲೇಷಿಸಿ

ತದನಂತರ ಬೇರೆಯಾಗಲು, ಆವಿಶ್ಲೇಷ ವ್ಯಸನವನ್ನು ವ್ಯಕ್ತಪಡಿಸುವಹಾಗೆ ಪರಸ್ಪರ ಹೇಳಿಕೊಂಡ ಮಾತುಗಳ ಧ್ವನಿಯನ್ನು ನೀನು ಕೇಳಲಿಲ್ಲವೋ, ಒಂದೂ ಅಱಿಯದವರಹಾಗೆ ನೀನು ಹೀಗೆ ವ್ಯರ್ಥವಾಗಿ ಕಾಲಹರಣ ಮಾಡಬಹುದೇ? ಆಚಾರ್ಯರುಗಳು ಅಲ್ಲಲ್ಲಿ ತಿರುಮಂತ್ರವನ್ನೂ ದ್ವಯಚರ್ಮ ಶ್ಲೋಕಂಗಳನ್ನೂ ಕುಱಿತು ವಿಶೇಷಾರ್ಥದಿಂದ ಚರ್ಚಿಸಿ ಅವುಗಳಿಂದ ವಿಶದವಾಗುವ ಏಕಾರ್ಥತೆಯನ್ನು ಸ್ಪಷ್ಟಪಡಿಸಿ ಅರ್ಥ ವಿಚಾರಮಾಡುವ ದಿವ್ಯ ಧ್ವನಿಯು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರಲು, ಸ್ವರೂಪೋಪಾಯ ಪುರುಷಾರ್ಥ ಜ್ಞಾನವು ಆವಿರ್ಭಾವವಾಗಿ, ವಿಶೇಷವಾದ ಭಗವದ್ವಿಷಯ ವ್ಯಾಮೋಹವುಳ್ಳ ಅನನ್ಯಾರ್ಹಶೇಷರಾದ ಭಾಗವತರು ಸಂಸಾರಿಚೇತನರನ್ನು ಸದುಪದೇಶದಿಂದ ಶಿಕ್ಷಿಸಲು, ಈ ಚೇತನರು ವಿಶೇಷ ಜ್ಞಾನವನ್ನು ಹೊಂದಿ ಮಾಡುವ ದಿವ್ಯಪ್ರಬಂಧಾರ್ಥಾನುಸಂಧಾನದ ಮಹಾಧ್ವನಿಯನ್ನೂ ನೀನು ಕೇಳಲಿಲ್ಲವೋ? ಭಾಗವತಗೋಷ್ಠಿಗೆ ಶಿರೋಭೂಷಣನಾಗತಕ್ಕ ಚೇತನನೇ, ನೀನೇ ನಮಗೆಲ್ಲಾ ಮುಖಂಡನಾಗಿ ಭಗವದ್ಗುಣಾನುಭವಕ್ಕೆ ತ್ವರೆಗೊಂಡು ನಮ್ಮನ್ನು ನಿಯೋಗಿಸತಕ್ಕವನಾಗಿರಲು, ನೀನು ಹೀಗೆ ತಾಮಸಮಾಡಬಹುದೇ! ಅಥವಾ ಶ್ರೀಮನ್ನಾರಾಯಣಸ್ವರೂಪನಾದ ಶ್ರೀಕೃಷ್ಣಸ್ವಾಮಿಯನ್ನು ನಾವು ಕೀರ್ತಿಸುತ್ತಿರಲಾಗಿ, ನೀನು ಅದನ್ನು ಕೇಳುತ್ತಲೇ ಆ ಗುಣಾಮೃತಾಬ್ಧಿಯಲ್ಲಿ ಮುಳುಗಿರುವೆಯೋ! ಭಗವತ್ಕಟಾಕ್ಷವನ್ನು ಪೂರ್ಣವಾಗಿ ಹೊಂದಿ ಕಂಗೊಳಿಸುವ ಚೇತನನೇ, ನಿನಗೇನು ಕಡಮೆ! ಆತ್ಮಯಾಥಾತ್ಮ್ಯ ಜ್ಞಾನವನ್ನು ಮುಚ್ಚಿಬಿಡುವ ದೇಹಾಭಿಮಾನವೆಂಬ ಕವಾಟವನ್ನು ತೆರೆದು ನಮಗೆ ಪ್ರಕಾಶವನ್ನು ನೀನು ಉಂಟುಮಾಡಲು, ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆಱವೇರುವುದು.

---

O soul! whose mind appears turned away from God, arise and awake. Did you not hear the sound of words expressive of sorrow at their mutual and unavoidable separation of the pious devotees of our Lord, when they, who are, unlike you, uninfluenced by the evil effects of Ahankâra (the idea of self) dispersed themselves after having enjoyed for a long time each others, agreeable company? Should you so uselessly waste your time, as if you were an ignoramus? The Acharyas, discussing with special glosses, the real import of '*Tirumantra*,' (sacred Mantrâ) on the one hand, and the '*Dwaya*', *Charamasloka*' on the other, came to the conclusion that the import of the one is identical with that of the other after a long and elaborate exposition; and such lectures having spread all over, the initiated, who are devoted to God and God alone, bearing in mind the knowledge of their real nature, the object of their real life, and the means of attaining it, being enamoured with teaching Theology, began to preach the true doctrine to mankind, who by virtue of this tuition are loudly expounding these very doctrines through the sacred Prabandhâs. Did not this thundering sound too reach your ear? It is very strange! You, who have got the capacity to become the leader of devotees, if you have a will, take up the lead and conduct us unto God to hold communion with Him. Should you be so slow as this! Or perhaps you are in reality immersed in the precious enjoyment of the Lord's nectar-like Presence, while all the time we are engaged in singing hymns of praise to the Supreme Being Krishna, who is no other than the Great *Narayana* O soul! beloved unto God, pardon us for our misapprehension; if you arrange to remove the obstruction of ignorance presided over by Ahankara shutting the gates of true knowledge, and spread the true light to us, we shall be in a fair way to bring the special vow to a successful fruition.

ಕೀೞ್ವಾನಂವೆಳ್ಳೆನ್ಱೆರುಮೈಶಿಱುವೀಡು |
ಮೇಯ್ವಾನ್ಪರನ್ದನಕಾಣ್ಮಿಕ್ಕುಳ್ಳಪಿಳ್ಳೈಕಳುಂ ‖
ಪೋವಾನ್ಪೋಕಿನ್ಱಾರೈಪ್ಪೋಕಾಮಱ್ಕಾತ್ತುನ್ನೈ |
ಕೂವುವಾನ್ವನ್ದುನಿನ್ಱೋಂಕೋದುಕಲಮುಡೈಯ ‖
ಪಾವಾಯೆೞುನ್ದಿರಾಯ್ಪಾಡಿಪ್ಪಱೈಕೊಣ್ಡು |
ಮಾವಾಯ್ಪಿಳನ್ದಾನೈಮಲ್ಲರೈಮಾಟ್ಟಿಯ ‖
ದೇವಾದಿದೇವನೈಚ್ಚೆನ್ಱುನಾಂಸೇವಿತ್ತಾಲ್ |
ಆವಾವೆನ್ಱಾರಾಯ್ನ್ದರುಳೇಲೋರೆಂಪಾವಾಯ್ ‖ ‖೮‖

ಪ್ರತಿಪದಾರ್ಥ.

ಕೀೞ್ವಾನಂ—ಮೂಡಲಿನ ದಿಙ್ಮಣ್ಡಲವು
ವೆಳ್ ಎನ್ಱು—ಬೆಳ್ಳಗಾಗಿ
ಎರುಮೈ—ಎಮ್ಮೆಗಳು
ಶಿಱುವೀಡು—ಎಳೆಯ ಮೇವನ್ನು
ಮೇಯ್ವಾನ್—ಮೇಯುವುದಕ್ಕೋಸ್ಕರ
ಪರನ್ದನಕಾಣ್—ಹೊರಟುಹೋದವಲ್ಲವೆ
ಮಿಕ್ಕುಳ್ಳ ಪಿಳ್ಳೈಕಳುಂ—ನಿನ್ನನ್ನು ವಿನಾ ಮಿಕ್ಕ ಗೋಪಿಯರು
ಪೋವಾನ್—ಸ್ನಾನಕ್ಕಾಗಿ ಹೋಗುವದಕ್ಕೆ
ಪೋಕಿನ್ಱಾರೈ—ಹೋಗುತ್ತಿದ್ದವರನ್ನು
ಪೋಕಾಮಲ್ ಕಾತ್ತು—ಹೋಗಲೀಸದೆ ತಡೆದು
ಉನ್ನೈ—ನಿನ್ನನ್ನು
ಕೂವುವಾನ್ವನ್ದುನಿನ್ಱೋಂ—ಕರೆಯುವುದಕ್ಕೆ ಬಂದು ನಿನ್ನ ಬಾಗಿಲಲ್ಲಿ ನಿಂತಿದೇವೆ [ವುಳ್ಳ
ಕೋದುಕಲಮುಡೈಯ—ಮನಸ್ಸಿನಲ್ಲಿ ಕುತೂಹಲ
ಪಾವಾಯ್, ಎೞುನ್ದಿರಾಯ್—ಅಂಗನೆಯೇ, ಏಳು
ಪಾಡಿ—ಶ್ರೀಕೃಷ್ಣಸ್ವಾಮಿಯನ್ನು ಕೊಂಡಾಡಿ
ಪಱೈಕೊಣ್ಡು—ಅವನು ದಯಪಾಲಿಸುವ ವಾದ್ಯವನ್ನು (ಇಷ್ಟಾರ್ಥಸಿದ್ಧಿಯನ್ನು ಹೊಂದಿ)
ಮಾವಾಯ್—ಅಶ್ವರೂಪವಾಗಿ ಬಂದ ಕೇಶಿಯೆಂಬ ರಾಕ್ಷಸನ ಬಾಯನ್ನು
ಪಿಳನ್ದಾನೈ—ಎರಡಾಗಿ ಸೀಳಿ ಕೊಂದವನನ್ನು
ಮಲ್ಲರೈ—ಚಾಣೂರಾದಿ ಮಲ್ಲ ವರ್ಗಂಗಳನ್ನು
ಮಾಟ್ಟಿಯ—ನಿರಸನಮಾಡಿದ
ದೇವಾದಿದೇವನೈ—ಬ್ರಹ್ಮಾದಿದೇವತೆಗಳಿಗೂ ದೇವನಾದ
ಶೆನ್ಱು—ಸೇರಿ, ಸಮೀಪಿಸಿ [ಸ್ವಾಮಿಯನ್ನು
ನಾಂಶೇವಿತ್ತಾಲ್—ನಾವು ಸೇವೆಮಾಡಿದರೆ
"ಆ ಆ" ಎನ್ಱು—ಅಯ್ಯೋ! "ಅಕಟ" ಎಂದು ಸ್ವಾಮಿಯು ಪರಿತಾಪಗೊಂಡು
ಆರಾಯ್ನ್ದು ಅರುಳ್—ಮನಸ್ಸಿನಲ್ಲಿ ಯೋಚಿಸಿ ಕೃಪೆ ಮಾಡಲು
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ನಮ್ಮ ವ್ರತವು
ಆಯ್—ಶುಭವಾಗಿ ತೀರ್ಗಡೆಯಾಗುವುದು.

ತಾತ್ಪರ್ಯ.

ಎಲೈ ಸಖಿಯೇ, ಪ್ರಾತಃಕಾಲವನ್ನು ಸೂಚಿಸುವಂತೆ ಮೂಡಲಿನದಿಙ್ಮಂಡಲವು ಬೆಳ್ಳಗಾಯಿತು; ಎಮ್ಮೆಗಳು ಎಳೆಯ ಮೇವನ್ನು ಮೇಯುವದಕ್ಕೋಸ್ಕರ ಗೋಷ್ಠಗಳನ್ನು ಬಿಟ್ಟು ಹೊರಟುಹೋದವಲ್ಲವೇ! ನಿನ್ನನ್ನು ವಿನಾ ಮಿಕ್ಕ ಗೋಪಿಯರೆಲ್ಲಾ ಸ್ನಾನಕ್ಕಾಗಿ ಹೋಗುತಲಿದಾರೆ, ಅವರನ್ನು ಹೋಗಲೀಸದೆ ತಡೆದು, ನಿನ್ನನ್ನೂ ಕರೆದುಕೊಂಡು ಹೋಗುವುದಕ್ಕೆ ನಾವೆಲ್ಲಾ ನಿನ್ನ ಬಾಗಿಲಲ್ಲಿ ನಿಂತಿದ್ದೇವೆ. ಭಗವದ್ಗುಣಾನುಭವದಲ್ಲಿ ಕುತೂಹಲವುಳ್ಳ ಕೋಮಲಾಂಗಿಯೇ, ಬೇಗ ಏಳು. ನಾವೆಲ್ಲಾ ಆ ಶ್ರೀಕೃಷ್ಣಸ್ವಾಮಿಯನ್ನು ಕೊಂಡಾಡಿ ಅವನು ದಯಪಾಲಿಸುವ ವಾದ್ಯವನ್ನು (ಇಷ್ಟಾರ್ಥ ಸಿದ್ಧಿಯನ್ನು) [illegible] ದುಷ್ಟಕೇಶಿಯೆಂಬ ರಾಕ್ಷಸನನ್ನು ನಿರಸನಮಾಡಿದಂಥಾವನಾಗಿಯೂ, ಚಾಣೂರಾದಿಮಲ್ಲ ವರ್ಗಂಗಳನ್ನು ಜಯಿಸಿದವನಾಗಿಯೂ, ಬ್ರಹ್ಮಾದಿದೇವತೆಗಳಿಗೂ ದೇವನಾದ ಆ ಸರ್ವೇಶ್ವರನನ್ನು ಸಮೀಪಿಸಿ ನಾವು ಸೇವೆಮಾಡಿದರೆ, ಅಯ್ಯೋ, ಅಕಟ ಎನ್ದು ಸ್ವಾಮಿಯು ನಮ್ಮಲ್ಲಿ ಪರಿತಾಪಗೊಂಡು ನಮ್ಮ ಅವಸ್ಥೆಯನ್ನು ಯೋಚಿಸಿ ಕೃಪೆಮಾಡಲು, ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿ ನೆರವೇರುವುದು.

## ಸ್ವಾಪದೇಶಾರ್ಥ—ರಹಸ್ಯಾರ್ಥ.

ಭಗವತ್ಕೃಪೆಯನ್ನು ವಿಶೇಷವಾಗಿ ಹೊಂದಿ ಅನನ್ಯಾರ್ಹಶೇಷರಾದ ಸ್ವಾಮಿಯೇ, ಅಚೇತನ ಪದಾರ್ಥಕ್ಕೂ ಸತ್ವಗುಣಾವಿರ್ಭಾವವು ಉಂಟಾಗತಕ್ಕ ಕಾಲವು ಪ್ರಾಪ್ತವಾಗಿದೆ; ನೀವು ಎಚ್ಚರಗೊಳ್ಳಬೇಕು; ಹೀಗೆ ಸತ್ವಗುಣವು ತಲೆಯೆತ್ತಿದ ಕೂಡಲೆ, ಅಜ್ಞಾನವು ತನಗೆ ನಿಲ್ಲಲು ಅವಕಾಶವಿಲ್ಲದೆ ಪಲಾಯನಂಗೈದು ತನಗೆ ಜೀವನೋಪಾಯವನ್ನೂ ನೆಲೆಯಾಗಿ ನಿಲ್ಲಲು ಜಾಗವನ್ನು ಹುಡುಕಿಕೊಂಡು ಹೊರಟುಹೋಯಿತು. ಭಗವತ್ಸನ್ನಿಧಿಗೆ ಹೋಗುವುದೇ ಪ್ರಯೋಜನವಾಗಿ ಉಳ್ಳ ಇತರ ಚೇತನರನ್ನು ಪುರುಷಕಾರದ ಮೂಲಕವಲ್ಲದೆ ಭಗವತ್ಸೇವೆಗೆ ಹೋಗಕೂಡದೆಂದು ತಡೆದು ಜೊತೆಯಲ್ಲಿ ಕರೆದುಕೊಂಡು ಪರಮಭಾಗವತರಾದ ನಿಮ್ಮ ಭವನದ ಬಾಗಿಲಲ್ಲಿ ಕಾದುಕೊಂಡು ನಿಂತಿದೇವೆ. ಭಗವದಭಿಮಾನದಲ್ಲಿ ಮುಳುಗಿರುವ ಸ್ವಾಮಿಯೇ, ಜಾಗ್ರತೆಯಾಗಿ ಬಿಜಯಮಾಡಿರಿ. ಅಹಂಕಾರ ನಿರಾಸಕನಾಗಿಯೂ, ಕಾಮಕ್ರೋಧಾದ್ಯರಿಷಡ್ವರ್ಗಗಳನ್ನು ಜಯಿಸಿದವನಾಗಿಯೂ ನಿತ್ಯಸೂರಿಗಳಿಗೆ ನಾಯಕನಾಗಿಯೂ, ಇರುವ ಸರ್ವೇಶ್ವರನಾದ ಶ್ರೀಕೃಷ್ಣಸ್ವಾಮಿಯನ್ನು ಕೊಂಡಾಡುವುದೇ ಪರಮಪುರುಷಾರ್ಥವೆಂದು ಭಾವಿಸಿ ಪ್ರಾಪ್ಯನಾದ ಆ ಶ್ರೀಮನ್ನಾರಾಯಣನನ್ನು ನಾವಾಗಿಯೇ ತ್ವರೆಯಿಂದ ಸಮೀಪಿಸಿ ಅವನ ಪಾದಸೇವೆಯನ್ನು ಮಾಡಿದರೆ, ಒಂದುವೇಳೆ ಅವನಿಗೆ ನಮ್ಮಲ್ಲಿ ಪ್ರಣಯಿತ್ವವೂ ಸ್ವಲ್ಪ ಕಡಮೆಯಾಗಿದ್ದರೂ, ಆರ್ತರಕ್ಷಣವನ್ನು ಮಾಡದಿರುವುದಿಲ್ಲ, ಆದ್ದರಿಂದ ನಮ್ಮ ಕೊರತೆಗಳನ್ನು ನಿವಾರಣೆಮಾಡಿ ನಮ್ಮಲ್ಲಿ ಕೃಪೆಮಾಡಲಾಗಿ, ನಮ್ಮ ಅಭೀಷ್ಟವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

---

High-souled revered Sir! on whom is bestowed our Lord's special Grace, and whose devotional service is suitably due unto God and God alone (*Ananyár-hasésha*). The present auspicious occasion is such as to develop the principle of *Satva* (Goodness) even to inanimate objects! Hence Ignorance, finding no shelter here, has disappeared in search of a safe retreat, where he may eke out his livelihood. Therefore be up and doing. These brethern whose sole end and aim of life is no other than approaching and serving the Lord, I have detained from going to Him direct, as they should not do so without a *Mediator*; and we have all come in a body to you, the best of devotees, and are waiting at your door to take you with us as our leader. Hence, revered Sir, conscious of the pride of being most beloved unto God, be pleased to join us soon. Let us all bestir ourselves to approach the Lord Sri Krishna, the dispeller of 'Ahankara', the victor over our six common enemies (desire, anger covetousness, ignorance, illusion, hatred), and the le der of the eternal denizens of Heaven; and offer our humble services, singing hallelinahs in His praise, which duty alone is the sole object of our life. He, under such circumstances, will not lag behind to protect us on hearing our devotional and piteous cries, though he may perhaps be slightly wanting in *affection* for us. When He, thus taking pity on us, favours us with His Grace, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, and other Excellences,

ತೂಮಣಿಮಾಡತ್ತುಚ್ಚುಟ್ರುಂವಿಳಕ್ಕೆರಿಯ |
ತೂಪಙ್ಗಮೞತ್ತುಯಿಲಣೈಮೇಲ್ಕಣ್ವಳರು ||
ಮಾಮಾನ್ಮಕಳೇಮಣಿಕ್ಕದವನ್ದಾಳ್ತಿಱವಾ |
ಯ್ಮಾಮೀರವಳೈಯೆೞುಪ್ಪೀರೋವುನ್ಮಕಳ್ತಾ ||
ನೂಮೈಯೋವನ್ಱಿಚ್ಚೆವಿಡೋವನನ್ದಲೋ |
ವೇಮಪ್ಪೆರುನ್ದುಯಿನ್ಮನ್ದಿರಪ್ಪಟ್ಟಾಳೋ ||
ಮಾಮಾಯನ್ಮಾದವನ್ವೈಕುನ್ದನೆನ್ಱೆನ್ಱು |
ನಾಮಂಪಲವುನವಿನ್ಱೇಲೋರೆಂಬಾವಾಯ್ || || ೯ ||

ಪ್ರತಿಪದಾರ್ಥ.

ತೂಮಣಿಮಾಡತ್ತು—ನಿರ್ಮಲವಾದ ರತ್ನಗಳಿಂದ ಕೆತ್ತಲ್ಪಟ್ಟ ಮಹಡಿಯ ಮನೆಯಲ್ಲಿ
ಚುಟ್ರುಂ—ಸುತ್ತಲೂ
ವಿಳಕ್ಕು ಎರಿಯ—ದೀಪಗಳು ಉರಿಯುತ್ತಿರಲು
ತೂಪಂ ಕಮೞ—ಧೂಪ ಅಗರು—ಇವು ಪರಿಮಳವನ್ನು ಬೀಸಲು
ತುಯಿಲ್ ಅಣೈಮೇಲ್—ಶಯನಿಸಿಕೊಳ್ಳುವ ಮೆತ್ತೆಯಮೇಲೆ
ಕಣ್ವಳರುಂ—ನಿದ್ರೆಮಾಡುವ
ಮಾಮಾನ್ಮಕಳೇ—ಸೋದರಮಾವನ ಮಗಳೇ
ಮಣಿಕ್ಕದವಂ—ಮಣಿಮಯದ ಬಾಗಿಲ
ತಾಳ್ ತಿಱವಾಯ್—ತಾಳಗಳನ್ನು ತೆಗೆ
ಮಾಮೀರ್—ಸೋದರತ್ತೆಯೇ
ಅವಳೈ ಎೞುಪ್ಪೀರೋ—ನೀವಾದರೂ ಅವಳನ್ನು ಎಬ್ಬಿಸಕೂಡದೇ
ಉನ್ಮಕಳ್ ತಾನ್—ನಿಮ್ಮ ಮಗಳು ತಾನೇ
ಊಮೈಯೋ—ಮೂಗಿಯೋ
ಅನ್ಱಿ ಚೆವಿಡೋ—ಅಥವಾ ಕಿವುಡೋ
ಅನನ್ದಲೋ—ಅಥವಾ ಬೆಳಗಿನಜಾವದ ಗಾಢನಿದ್ರೆಯೋ
ಏಮಪ್ಪೆರುನ್ದುಯಿಲ್—ಮೋಹಗೊಳಿಸುವ ಗಾಢನಿದ್ರೆ ಬರುವಂತೆ
ಮನ್ದಿರಪ್ಪಟ್ಟಾಳೋ—ಮಂತ್ರಿಸಲ್ಪಟ್ಟಳೋ
ಮಾಮಾಯನ್—ಆಶ್ಚರ್ಯಗುಣಚೇಷ್ಟಿತನು
ಮಾಧವನ್—ಶ್ರಿಯಃಪತಿಯು
ವೈಕುನ್ದನ್—ಶ್ರೀವೈಕುಂಠಾಧಿಪತಿಯು
ಎನ್ಱೆನ್ಱು—ಎಂದೆಂದು ಹೇಳಿಹೇಳಿ
ನಾಮಂಪಲವುಂ—ಅವನ ದಿವ್ಯ ಸಹಸ್ರನಾಮಂಗಳನ್ನು
ನವಿನ್ಱು—ಅನುಸಂಧಾನಮಾಡಲು
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಬಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು.

ತಾತ್ಪರ್ಯ.

ನಿರ್ಮಲವಾದ ರತ್ನಂಗಳಿಂದ ಕೆತ್ತಲ್ಪಟ್ಟ ಮಹಡಿಯಮನೆಯಲ್ಲಿ ಸುತ್ತಲೂ ದೀಪಗಳು ಉರಿಯುತ್ತಿರಲು, ಮತ್ತು ಸಾಂಬ್ರಾಣಿ ಮುಂತಾದ ಪರಿಮಳದ್ರವ್ಯಗಳ ಧೂಪವು ಎಲ್ಲಾ ಕಡೆಯಲ್ಲಿಯೂ ಸುವಾಸನೆಯನ್ನು ಬೀಸುತ್ತಿರಲಾಗಿ, ಹಂಸತೂಲಿಕಾತಲ್ಪದಿಂದಿರುವ ಪರ್ಯಂಕದಲ್ಲಿ ಶಯನಿಸಿ ನಿದ್ರೆಮಾಡುವ ಸೋದರಮಾವನ ಮಗಳೇ, ಮಣಿಮಯವಾದ ಬಾಗಿಲ ತಾಳಗಳನ್ನು ತೆಗೆ, ಎಷ್ಟು ಹೊತ್ತು ನೀನು ಹೀಗೆ ಶಯನಿಸಿಕೊಂಡಿರುವುದು! ಬೇಗ ಏಳು. ಅತ್ತೆ ತಿರುಗಿ "ಎಲೈ ಸೋದರತ್ತೆಯೇ, ಇವಳು ಏಕೋ ಮಾತಾಡುವುದಿಲ್ಲ, ನೀವಾದರೂ ಎಬ್ಬಿಸಕೂಡದೇ! ಇದೇನು ನಿಮ್ಮ ಮಗಳು ಮೂಗಿಯೋ ಅಥವಾ ಕಿವುಡೋ! ಏಕೆ ಮೌನವಾಗಿ ಇರುವಳು; ಅಥವಾ ಇವಳಿಗೆ ಈಗ ಬೆಳಗಿನ ಜಾವದಲ್ಲಿ ಬರುವ ಗಾಢವಾದ ತೂಗಳುನಿದ್ರೆಯೋ! ಇಲ್ಲ ಇವಳಿಗೆ ಮೋಹಗೊಳಿಸುವ ಗಾಢನಿದ್ರೆ ಬರುವಂತೆ ಯಾರಾದರೂ ಮಂತ್ರಿಸಿ ಬಿಟ್ಟಿದಾರೆಯೋ" ಹೀಗಿರದೆ ಇವಳೂ ನಮ್ಮೊಂದಿಗೆ ಸೇರಿ ಸರ್ವಸ್ವಾತ್ಮಭೂತನಾದ ಶ್ರೀಕೃಷ್ಣನನ್ನು "ಆಶ್ಚರ್ಯಗುಣಚೇಷ್ಟಿತನು, ಮಾಧವನು, ಶ್ರೀವೈಕುಂಠಪತಿಯು" ಎಂದು ಇವೇ ಮೊದಲಾದ ಅವನ ದಿವ್ಯಸಹಸ್ರನಾಮಂಗಳನ್ನು ಅನೇಕಾವರ್ತಿ ಅನುಸಂಧಾನಮಾಡಲು, ಅದ್ವಿತೀಯವಾದ ಈ ನಮ್ಮ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.



ಸ್ವಾಪದೇಶಾರ್ಥ—ರಹಸ್ಯಾರ್ಥ.

"ನಮ್ಮ ಸ್ವಾಮಿಯಿಂದ ಪುತ್ರತ್ವೇನ ಅಭಿಮಾನಿಸಲ್ಪಟ್ಟ ಅನನ್ಯಾರ್ಹರಾದ ಚೇತನರೇ, ಅಪ್ರಾಕೃತವಾಗಿಯೂ ಪಂಚೋಪನಿಷನ್ಮಯವಾಗಿಯೂ ಇರುವ ನಿಮ್ಮ ದಿವ್ಯ

ಮಂಗಳವಿಗ್ರಹದಲ್ಲಿ ಸರ್ವತೋಮುಖವಾದ ಜ್ಞಾನಪ್ರದೀಪವು ಎಲ್ಲಾಕಡೆಯಲ್ಲಿಯೂ ಪ್ರಕಾಶಿಸುತ್ತಾ, ಅನುಷ್ಠಾನ ಪರ್ಯವಸಾಯಿಯಾಗಿರಲು, ಸ್ವಪ್ರಯತ್ನ ಯಾವುದೂ ಇಲ್ಲದೆ ನೀವು ಭಗವದೇಕೋಪಾಯಾಧ್ಯವಸಾಯದಲ್ಲಿ ನಿಷ್ಠೆಗೊಂಡಿರುವುದನ್ನು ನೋಡಿ ನಾವು ಆನಂದಿಸುತ್ತೇವೆ; ನಮಗೆ ಅನುಭವವಿರೋಧಿಯಾಗಿರುವ ಮಮಕಾರವನ್ನು ಹೋಗಲಾಡಿಸಿ ನಿಮ್ಮ ಮಾರ್ಗವನ್ನೇ ನಾವೂ ಅನುಸರಿಸುವಂತೆ ಕೃಪೆಮಾಡಿರಿ.” ಹೀಗೆಂದು ಭಗವದನುಭವ ಕುತೂಹಲರಾದ ಕೆಲವು ಭಾಗವತರು ಪ್ರಾರ್ಥಿಸಿದರೂ, ಆ ಅಧಿಕಾರಿಯು ಸ್ವನಿಷ್ಠೆಯಲ್ಲಿಯೇ ಏಕಾಗ್ರಚಿತ್ತರಾಗಿ ಯಾವ ಉತ್ತರವನ್ನು ಹೇಳದಿದ್ದರು. ಆಗ ಈ ಭಾಗವತರು ಪುರುಷಕಾರಭೂತೆಯಾದ ಶ್ರೀದೇವಿಯನ್ನು ಕುರಿತು—ಎಲೈ ಲೋಕಜನನಿಯೇ, ನಿನ್ನಲ್ಲಿ ಅನನ್ಯೋಪಾಯತ್ವ ಸ್ವರೂಪಜ್ಞಾನವುಳ್ಳ ಈ ಅಧಿಕಾರಿಯನ್ನು ಬ್ರಹ್ಮನಿಷ್ಠೆಯಲ್ಲಿ ಉದ್ಯೋಗಿಸಬಾರದೇ? ಅಥವಾ ವಾಗಾದೀಂದ್ರಿಯಂಗಳು ಬೇಕೆಬೇಕೆ ಭಗವದ್ವಿಷಯದಲ್ಲಿಯೇ ಏಕಾಂತವಾಗಿ ಪ್ರಾವಣ್ಯವನ್ನು ಹೊಂದಿರುವುದರಿಂದ ಪ್ರಶ್ನೆ ಮಾಡಿದವರಿಗೆ ಪ್ರತ್ಯುತ್ತರ ಹೇಳುವುದೇ ಮೊದಲಾದ ಬಾಹ್ಯ ವಿಷಯಪ್ರವೃತ್ತಿ ಇವರಿಗೆ ಇಲ್ಲದೆ ಹೋಗಿದೆಯೋ! ಅಥವಾ ಇವರಿಗೆ ಅಷ್ಟಾಕ್ಷರಮಂತ್ರ ಭಾಗವಾದ “ನಮಃ” ಎಂಬುವದರಿಂದ ಉಪಾಯ ವೈಲಕ್ಷಣ್ಯ ಜ್ಞಾನ ಉಂಟಾಗಿ, ಪ್ರವೃತ್ಯಂತರದಲ್ಲಿ ಅನ್ವಯವಿಲ್ಲದೆ ಏಕಾಂತವೃತ್ತಿಯಲ್ಲಿ ಅವಗಾಹಿತರಾಗಿ ಇವರು ಮೋಹಿತರಾಗಿದ್ದಾರೆಯೋ! ನಮ್ಮ ಸ್ವಾಮಿಯು ಸರ್ವಸುಲಭ, ಶ್ರಿಯಃಪತಿ, ಪರಾತ್ಪರವಸ್ತು, ಎಂದು ಅವನ ದಿವ್ಯನಾಮಂಗಳನ್ನೂ ಕಲ್ಯಾಣಗುಣಂಗಳನ್ನೂ ಅನುಸಂಧಾನಮಾಡುತ್ತೇವೆ; ಈಗಲಾದರೂ ಅವರನ್ನು ಪ್ರತ್ಯುನ್ಮುಖರಾಗಿ ನಮ್ಮೊಡನೆ ಸೇರುವ ಹಾಗೆ ನೀನು ಕೃಪೆಮಾಡಿದರೆ, ನಮ್ಮ ಭಗವತ್ಕೈಂಕರ್ಯರೂಪವಾದ ಈ ಅದ್ವಿತೀಯವ್ರತವು ಶುಭವಾಗಿ ನೆರವೇರುವುದು.

---

"Revered Sir, that hast secured by thy special devotion the unenviable position of being a special son of our Lord! in thy ultramundane ethereal body, imbued with the spirit of the five Nârâyana Upanishads, shines resplendent the many-sided great light of wisdom dispersing its lustrous rays all around, and is in practical enjoyment of bliss; and we are all glad at seeing that thou hast reached this excellent contemplative stage in which thy soul clings to God as the only hope of salvation. O Sir, be pleased to favour us with the same spirit to follow thy footsteps, after getting rid of the evil effects of Ahankâra which stands in the way of our salvation and perfect enjoyment of bliss." Though a few of these devotees thus made a request, this revered sage did not vouchsafe them any reply, but was wholly engaged in his own uninterrupted enjoyment of God's Glory; and then the whole party, being slightly disappointed, began to address Lakshmi in the hope that she would effect proper mediation between this holy sage and themselves, and secure for them their wishes "O mother of all, canst thou not kindly favour us so much as to call his attention towards us, so that he may condescend to speak to us; or is it a fact that he is entirely absorbed in holding communion with the Lord as to forget all external impressions, and hence not in a position either to hear us or to give an answer? Or is he so spellbound by the peculiar spiritual influence of *Namas* (The middle portion of the sacred *Mantra* of Ashtâkshara) as to be entirely unaffected by all objective phenomena. Any how we shall arrange to sing, in praise of our Lord, His sacred names to the effect that He is all simple and accessible, He is the consort of Lakshmi, He is the King of kings and Lord of lords &c., as indicative of His Great Glory, Omniscience and other eminent Virtues, when at least thou mayest be pleased to wake up the revered sage so that he may unite with us in the performance of our happy duty, and we may be in a fair way to bring the special vow to a successful fruition."

ನೋಱ್ಱುಚ್ಚುವರ್ಗಂಪುಕುಕಿನ್ಱವಮ್ಮನಾಯ್ ।
ಮಾಱ್ಱಮುನ್ದಾರಾರೋವಾಶಲ್ತಿಱವಾದಾರ್ ॥
ನಾಱ್ಱತ್ತುೞಾಯ್ಮುಡಿನಾರಾಯಣನನಮ್ಮಾಲ್ ।
ಪೋಱ್ಱಪ್ಪಱೈತರುಂಪುಣ್ಣಿಯನಾರ್ಪಣ್ಡೊರುನಾಳ್ ॥
ಕೂಱ್ಱತ್ತಿನ್ವಾಯ್ವೀೞ್ನ್ದಕುಂಬಕರುಣನುಂ ।
ತೋಱ್ಱುಮುನಕ್ಕೇಪೆರುನ್ದುಯಿಲ್ತಾನ್ದನ್ದಾನೋ ॥
ಆಱ್ಱವನನ್ದಲುಡೈಯಾಯರುಙ್ಗಲಮೇ ।
ತೇಱ್ಱಮಾಯ್ವನ್ದುತಿಱವೇಲೋರೆಂಬಾವಾಯ್ ॥ ॥ ೧೦ ॥

ಪ್ರತಿಪದಾರ್ಥ.

ನೋಱ್ಱು—ವ್ರತಾಚರಣವನ್ನು ಮಾಡಿ
ಚ್ಚುವರ್ಗಂ—ಸ್ವರ್ಗವನ್ನು
ಪುಕುಕಿನ್ಱ—ಹೊಂದತಕ್ಕ
ಅಮ್ಮನಾಯ್—ತಾಯೇ
ಮಾಱ್ಱಮುಂತಾರಾರೋ—ಬದಲುಮಾತನ್ನೂ ಹೇಳರೋ [ರುವವರು
ವಾಶಲ್ ತಿಱವಾದಾರ್—ಬೀದಿಯ ಬಾಗಿಲನ್ನು ತೆಗೆಯದಿ
ನಾಱ್ಱತ್ತುೞಾಯ್—ಸುವಾಸನೆಯುಳ್ಳ ತುಳಸಿಯನ್ನು
ಮುಡಿ—ಶಿರಸ್ಸಿನಲ್ಲಿ ಧರಿಸಿರುವ
ನಾರಾಯಣನ್—ಸರ್ವಸ್ವಾಮಿತ್ವರನಾದ ಶ್ರೀಕೃಷ್ಣನು
ನಮ್ಮಾಲ್ ಪೋಱ್ಱ—ನಮ್ಮಗಳಿಂದ ಮಂಗಳಾಶಾಸನ ಮಾಡಲ್ಪಡಲು
ಪಱೈತರುಂ—ಪುರುಷಾರ್ಥವನ್ನು ಕೊಡುವನು
ಪುಣ್ಣಿಯನಾಲ್—ಪುಣ್ಯಾತ್ಮನಾದ ಸ್ವಾಮಿಯಿಂದ (ಶ್ರೀ ರಾಮನಿಂದ)
ಪಣ್ಡೊರುನಾಳ್—ಹಿಂದಿನಕಾಲದಲ್ಲಿ ಒಂದು ದಿವಸ
ಕೂಱ್ಱತ್ತಿನ್ ವಾಯ್ವೀೞ್ನ್ದ—ಯಮನಿಗೆ ತುತ್ತಾದ
ಕುಂಬಕರುಣನುಂ—ಕುಂಭಕರ್ಣನು
ತೋಱ್ಱುಂ ಉನಕ್ಕೇ—ಸೋತುಹೋಗಿ, ನಿನಗೇನೇ
ಪೆರುಂತುಯಿಲ್ ತಾನ್—ಗಾಢನಿದ್ರೆಯನ್ನು
ತನ್ದಾನೋ—ಕೊಟ್ಟನೋ
ಆಱ್ಱ ಅನನ್ದಲುಡೈಯಾಯ್—ಅಧಿಕವಾದ ನಿದ್ರೆಯುಳ್ಳವಳೇ
ಅರುಙ್ಗಲಮೇ—ನಮಗೆ ಅತಿಶಯವಾದ ಆಭರಣಪ್ರಾಯಳೇ
ತೇಱ್ಱಮಾಯ್ ವನ್ದು—ಶಾಂತವಾಗಿ ಬಂದು
ತಿಱ—ಬಾಗಿಲನ್ನು ತೆಗೆ
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಬಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆಱವೇಱುವುದು.

ತಾತ್ಪರ್ಯ.

ಅಮ್ಮ ಕೃತವಾದ ವ್ರತಾಚರಣಂಗಳನ್ನು ಮಾಡಿ ಸ್ವರ್ಗಸುಖಾನುಭವವನ್ನು ಹೊಂದತಕ್ಕ ತಾಯೇ, ಎಚ್ಚೆತ್ತು ಬೇಗ ಏಳು; ಏಕೆ ಸುಮ್ಮನೆ ಇದ್ದೀ, ಬೀದಿಯಬಾಗಿಲನ್ನು ತೆಗೆಯದೆ ಇದ್ದಾಗ್ಯೂ ಒಂದು ಬದಲುಮಾತನ್ನೂ ಹೇಳರೋ! ಬಹು ಚೆನ್ನಾಗಿದೆ! ಪರಿಮಳವಾದ ವಾಸನೆಯುಳ್ಳ ತುಳಸೀಮಾಲೆಯನ್ನು ಶಿರಸ್ಸಿನಲ್ಲಿ ಧರಿಸಿರುವ ಸರ್ವಸ್ವಾಮಿತ್ವರನಾದ ಶ್ರೀಕೃಷ್ಣನು ದಾಸಭೂತರಾದ ನಮ್ಮಗಳಿಂದ ಮಂಗಳಾಶಾಸನಮಾಡಲ್ಪಡಲು, ನಮ್ಮ ಪುರುಷಾರ್ಥಸಿದ್ಧಿಯನ್ನು ಮಾಡಿಕೊಡುವನು, ಬೇಗನೆ ಏಳು. ಪುಣ್ಯಾತ್ಮನಾದ ಆ ಶ್ರೀರಾಮನಿಂದ ಹಿಂದಿನಕಾಲದಲ್ಲಿ ಯಮನಿಗೆ ತುತ್ತಾಗಿ ಮಾಡಲ್ಪಟ್ಟ ಆ ಕುಂಭಕರ್ಣನು ನಿನಗೆ ಸೋತುಹೋಗಿ, ನಿನಗೇನೇ ತನ್ನ ಗಾಢನಿದ್ರೆಯನ್ನೆಲ್ಲಾ ಕೊಟ್ಟುಬಿಟ್ಟನೋ! ಇದೇನು ಹೀಗೆ ಮಲಗಿದ್ದೀಯೆ! ನಮಗೆಲ್ಲಾ ಅತಿಶಯವಾದ ಆಭರಣಪ್ರಾಯಳೇ, ಹೀಗೆ ನೀನು ಹುಚ್ಚುನಿದ್ರೆಯಲ್ಲಿ ಮುಳುಗಿ ಹೋಗಬಹುದೇ! ತಿಳುವಾಗಿ ಎಚ್ಚರಗೊಂಡು ಜಾಗ್ರತೆಯಿಂದ ಬಂದು ಬಾಗಿಲನ್ನು ತೆಗೆ. ನೀನು ನಮ್ಮ ಜೊತೆಯಲ್ಲಿ ಸೇರಲಾಗಿ, ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿ ನೆರವೇರುವುದು.

## ಸ್ವಾಪದೇಶಾರ್ಥ--ರಹಸ್ಯಾರ್ಥ.

ಸಿದ್ಧಸಾಧನ ಪರಿಗ್ರಹವನ್ನು ಮಾಡಿ ಸುಖರೂಪವಾದ ಪಾರತಂತ್ರ್ಯವನ್ನು ಅನುಭವಿಸುವ ಸ್ವಾಮಿಯೇ, ನಮ್ಮಗಳ ವಿರೋಧಿಯಾದ ಅಹಂಕಾರ ಮಮಕಾರಂಗಳು ನೀಗಿ, ನಿಮ್ಮನ್ನು ಕಣ್ಣಾರ ಸೇವಿಸಲು ನಮಗೆ ಪ್ರಾಪ್ತಿಯಿಲ್ಲದಿದ್ದರೂ ನಮ್ಮನ್ನು ಉದ್ಧರಿಸತಕ್ಕ ನಿಮ್ಮ ಒಂದು ಮಾತುಕೂಡ ಕೇಳಲು ದುರ್ಘಟವಾಗಬಹುದೇ! ನಮ್ಮಂಥವರ ಆರ್ತಧ್ವನಿಯನ್ನು ಕೂಡಲೆ ಕೇಳಲು ತನಗೆ ಅನುಕೂಲವಾಗುವಂತೆ ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿಕೊಂಡಿರುವ ಶ್ರೀಮನ್ನಾರಾಯಣನ ದಿವ್ಯಪಾದಂಗಳನ್ನು ನಾವು ಪೂಜಿಸಿದರೆ, ನಮ್ಮ ಪುರುಷಾರ್ಥಂಗಳನ್ನು ಅವಶ್ಯವಾಗಿ ನೆರವೇರಿಸುವನು. ಚಿರಕಾಲ ಗಾಢನಿದ್ರೆಯನ್ನು ಉಂಟುಮಾಡತಕ್ಕ ತಮೋಗುಣವು ನಿಮ್ಮ ಆತ್ಮತೇಜಃಪ್ರಭಾವದಿಂದ ನಿಗ್ರಹಿಸಲ್ಪಟ್ಟು ನಷ್ಟವಾಗಿ ಹೋಗಲು, ಸ್ವಾನುಭವದಶೆಯಲ್ಲಿ ಆತ್ಮಪರಿಷ್ವಂಗವನ್ನು ಹೊಂದಿದ ಪ್ರಾಜ್ಞರಾದ ನಿಮ್ಮನ್ನು ಅಜ್ಞರಾದ ನಾವು ಗಾಢನಿದ್ರಾವೃತರೆಂದು ಭಾವಿಸುತ್ತೇವೆ. ವ್ಯಾಪಾರಾಂತರದಲ್ಲಿ ಅಭಿರುಚಿಯಿಲ್ಲದ ನಮ್ಮ ಶಿರೋಭೂಷಣಪ್ರಾಯರೇ! ನಮ್ಮ ದುರವಸ್ಥೆಯನ್ನು ನೋಡಿ ನೀವು ಕನಿಕರಕೊಂಡಿ ಅಜ್ಞಾನವೆಂಬ ಕವಾಟವನ್ನು ತೆಗೆದು ತತ್ವೋಪದರ್ಶನವಾಗುವಹಾಗೆ ಮಾಡಿ ನಮ್ಮೊಡನೆ ಸೇರಿಅನುಗ್ರಹಿಸಿದರೆ, ಭಗವತ್ಕೈಂಕರ್ಯರೂಪವಾದ ಈ ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು

---

Revered Sir, that hast already secured the blessed position of God's enjoyment by resorting to the most approved and best methods of reaching Him! While it did not fall to our lot to get rid of the evil effects of our Ahankâra and Mamakâra (the idea of self and mine), and consequently to have the happiness of approaching and enjoying thy glorious presence with our own eyes, should we be so unfortunate as not to hear from thee even an encouraging word of reply that would prove an invaluable source of salvation to us? On the other hand, if we should worship the sacred Feet of our Lord Nârâyana whose presence is all—pervading so as to easily hear and immediately remedy the piteous and pious complaints of His favourite devotees, He will readily fulfil our cherished desire While the principle of "*Tamas*" that envelops beings in a sort of profound forgetfulness and ignorance, is subdued and brought to ruin by the resplendent light and glory of thy pure soul, we ignorantly indulge ourselves in the fond belief that thou art in an unconscious state arising from deep slumber, not knowing that thou art solemnly engaged in the uninterrupted communion with the Lord. Ornament of our brotherhood! pious devotee, unengaged in other mundane pursuits! taking pity on our miserable condition, if thou shouldst be pleased to open the gate of ignornace in our way, and vouchsafe us the presence of the true light, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Goodness, Mercy, and other Excellences.

## ಸ್ವಾಪದೇಶಾರ್ಥ—ರಹಸ್ಯಾರ್ಥ.

ಈಶ್ವರನೇ ಉಪಾಯೋಪೇಯನೆಂದು ಅಧ್ಯವಸಾಯವುಳ್ಳ ಅಧಿಕಾರಿಯೇ, ಇತ್ತ ದಯೆಮಾಡಿಸಿ; ಸಸಂತಾನರಾದ ಶಿಷ್ಯಸಮೂಹಂಗಳಿಗೆ ಅವರವರ ಅಭಿನಿವೇಶಾನುಗುಣವಾಗಿ ತಾವು ಜ್ಞಾನಪ್ರದಾನ ಮಾಡುವುದಲ್ಲದೆ, ಉಪಾಯಾಂತರಪರರೂ ಉಪೇಯಾಂತರಪರರೂ ಆಗಿರುವವರ ಸ್ವಾರ್ಥಪರತೆಯು ಪೂರ್ಣವಾಗಿ ನಾಶಕೊಂಡುವಂತೆ ತಮ್ಮ ಉಪದೇಶದಿಂದ ನಿವಾರಣೆಮಾಡಿ, ಪೂರ್ವೋತ್ತರಾಘಂಗಳು ಯಾವುದೂ ಇಲ್ಲದಂತೆ ಪರಿಶುದ್ಧರಾಗಿರುವ ಆಚಾರ್ಯರಲ್ಲಿ ಶಿರೋಭೂಷಣಪ್ರಾಯರೇ, ದಹರಾಕಾಶ ಮಧ್ಯಸ್ಥಿತನಾದ ಪರಮಾತ್ಮನ ವಿಚಾರದಲ್ಲಿ ಪರಮಭಕ್ತಿಯನ್ನೂ ವ್ಯಾಮೋಹವನ್ನೂ ಉಳ್ಳ ಸ್ವಾಮಿಯೇ, ನೀವು ಹೊರಗೆ ಹೊರಟು ದಾಸಭೂತರಾದ ಎಮ್ಮೊಡನೆ ಕೃಪೆಯಿಂದ ಬರಬೇಕು. ಇದಲ್ಲದೆ ಅನನ್ಯಾರ್ಹಶೇಷಭೂತರಾದ ಭಾಗವತರು ನಿಮ್ಮ ಭವನದ ಮುಂಭಾಗದಲ್ಲಿ ನೀವೂ ಜೊತೆಯಲ್ಲಿಯೇ ಸೇರಿಬರಬೇಕೆಂಬ ತಾತ್ಪರ್ಯದಿಂದ ಆರ್ತತ್ರಾಣಪರಾಯಣನಾದ ಶ್ರೀಕೃಷ್ಣನ ದಿವ್ಯನಾಮಂಗಳನ್ನು ಕೊಂಡಾಡುತ್ತಿರುವರು. ಭಗವದ್ಗುಣಂಗಳನ್ನು ಅನುಭವಿಸುವುದೆಂಬ ಸಂಪತ್ತುಳ್ಳ ಸ್ವಾಮಿಯೇ, ಕರಣವ್ಯಾಪಾರಗಳೂ ಯಾವುದೂ ಇಲ್ಲದೆಯೂ ಪ್ರತ್ಯುತ್ತರವನ್ನು ಕೊಡದೆಯೂ ಹೀಗೆ ಏಕನಿಷ್ಠರಾಗಿರುವುದು ಏತಕ್ಕೆ? ನಾವುಗಳು ಭಗ್ನಮನೋರಥರಾಗಿ ಹಿಂತಿರುಗಿ ಹೋಗಲೆಂದೋ, ಅಥವಾ ಸಂಸಾರಿಗಳಾದ ನಮ್ಮಂಥಾ ಚೇತನರನ್ನು ಶಿಕ್ಷಿಸುವುದಕ್ಕೋಸ್ಕರಲೋ! ನಿಜಸಂಗತಿಯನ್ನು ನಮಗೆ ತಿಳಿಸಿ ನಮ್ಮೊಡನೆ ನೀವು ಸೇರಲು, ನಮ್ಮ ಅಪೇಕ್ಷೆಯುವಾದ ಭಗವತ್ಕೈಂಕರ್ಯರೂಪ ವ್ರತವು ಸಾಂಗವಾಗಿಯೂ ಶುಭವಾಗಿಯೂ ನಡೆಯುವುದು.

---

Revered Sir, that hast secured the high dignity and position by which thou hast rightly concluded that the Supreme Being is the sole end and means of salvation! be pleased to wake up and shew us thy presence. Thou hast kindly given thy disciples, as well as their vast retinue, instruction in the mysteries of Ontology suitable to their different grades of spiritual development, and hast also brought back to thy fold, by thy lucid and correct exposition of the true doctrine, other erring souls that had resorted to other sources than the Supreme Being for the attainment of final liberation and salvation; O pure spirit, free from all sins—past or future, leader of theologians, that hast fondly devoted thyself to the sole service of the Lord, seated in the innermost vacuity of the heart of all beings, end to join us soon, and work with us. Besides, our brethren who are solely devoted to God, have congregated in the front yard of thy mansion, singing hymns in praise of our Lord, Sri Krishna—the Saviour of all—with the view of requesting thee to join us in our work. Revered Sir, rich in the uninterrupted enjoyment of the Lord, how is it that thou dost not even deign to give an answer to us without making the least stir, mental or physical, as one fully absorbed? Is it to see us return thoroughly disappointed? Or is it to set an example to us, mortals, suffering from the bonds of rebirths and misery as to our rule of conduct? If thou shouldst kindly relate to us the true state of things and unite with us, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Goodness, Mercy, and other Excellences.

ಕನೈತ್ತಿಳಙ್ಗಱ್ಱೆರುಮೈಕನ್ಱುಕ್ಕಿರಙ್ಗಿ ।
ನಿನೈತ್ತುಮುಲೈವಳಿಯೇನಿನ್ಱುಪಾಲ್ಸೋರ ॥
ನನೈತ್ತಿಲ್ಲಂಸೇಱಾಕ್ಕುನಱ್ಱೆಲ್ವನ್ತಙ್ಗಾಯ್ ।
ಪನಿತ್ತಲೈವೀೞನಿನ್ವಾಸಱ್ಕಡೈಪಱ್ಱಿ ॥
ಸಿನತ್ತಿನಾಱ್ತೆನ್ನಿಲಙ್ಗೈಕ್ಕೋಮಾನೈಚ್ಚೆಱ್ಱ ।
ಮನತ್ತುಕ್ಕಿನಿಯಾನೈಪ್ಪಾಡವುಂನೀವಾಯ್ತಿಱವಾಯ್ ॥
ಇನಿತ್ತಾನೆೞುನ್ದಿರಾಯೀದೆನ್ನಪೇರುಱಕ್ಕಂ ।
ಅನೈತ್ತಿಲ್ಲತ್ತಾರುಮಱಿನ್ದೇಲೋರೆಂಬಾವಾಯ್ ॥ ॥ ೧೨ ॥

ಪ್ರತಿಪದಾರ್ಥ.

ಕನೈತ್ತು—ಆರ್ತಧ್ವನಿಮಾಡಿ
ಇಳಙ್ಗಱ್ಱೆರುಮೈ—ಎಳೆಯದಾದ ಕರುಗಳುಳ್ಳ ಎಮ್ಮೆಗಳು
ಕನ್ಱುಕ್ಕು ಇರಙ್ಗಿ—ತಮ್ಮ ಕರುಗಳಲ್ಲಿ ಪ್ರೀತಿಯಿಂದ ಕನಿಕರಗೊಂಡು
ನಿನೈತ್ತು—(ಉಣ್ಣುತ್ತೇ ಜ್ಞಾಪಿಸಿಕೊಂಡು) ಕೂಡಲೆ
ಮುಲೈವಳಿಯೇ—ಕೆಚ್ಚಲುಗಳಿಂದ
ನಿನ್ಱುಪಾಲ್ಸೋರ—ಎಡೆಬಿಡದೆ ಹಾಲು ಪ್ರವಹಿಸಲು
ನನೈತ್ತು—ನನಸಿ
ಇಲ್ಲಂ ಸೇಱಾಕ್ಕುಂ—ಮನೆಯೆಲ್ಲಾ ಕೆಸರು ಮಾಡತಕ್ಕ
ನಲ್, ಶೆಲ್ವನ್—ಬಳ್ಳೇ ಸಂಪತ್ತುಳ್ಳ ಗೋಪಾಲಕನ
ತಙ್ಗಾಯ್—ಸಹೋದರಿಯೇ
ಪನಿತ್ತಲೈವೀೞ—ಬೆಳಗಿನಜಾವದ ಹನಿ ತಲೆಯಮೇಲೆ ಬೀಳಲು [ಹತ್ತಿ
ನಿನ್ವಾಸಲ್ ಕಡೈಪಱ್ಱಿ—ನಿನ್ನ ಬಾಗಿಲ ಪ್ರದೇಶವನ್ನು

ಸಿನತ್ತಿನಾಲ್—ಕೋಪದಿಂದ
ತೆನ್ನಿಲಙ್ಗೈಕ್ಕೋಮಾನೈ—ಲಂಕಾರಾಜ್ಯಾಧಿಪತಿಯಾದ ರಾವಣನನ್ನು
ಚೆಱ್ಱ—ಕೊಂದ
ಮನತ್ತುಕ್ಕು ಇನಿಯಾನೈ—ಮನಸ್ಸಿಗೆ ಆಹ್ಲಾದಕರನಾದ ಶ್ರೀರಾಮಚಂದ್ರನನ್ನು
ಪಾಡವುಂನೀ—ಕೊಂಡಾಡುತ್ತಿರುವಾಗ್ಯೂ ನೀನು
ವಾಯ್‌ತಿಱವಾಯ್—ಬಾಯಿಬಿಡುವುದೇ ಇಲ್ಲಾ
ಇನಿತ್ತಾನ್ ಎೞುನ್ದಿರಾಯ್—ಇನ್ನುಮೇಲಾದರೂ ಏಳು
ಈದು ಎನ್ನ ಪೇರುಱಕ್ಕಂ—ಇದೇನು ಹುಚ್ಚುನಿದ್ರೆ
ಅನೈತ್ತಿಲ್ಲತ್ತಾರುಂ—ಎಲ್ಲಾ ಮನೆಯವರೂ
ಅಱಿನ್ದು—ತಿಳಿಯುವಹಾಗೆ ನೀನು ನಮ್ಮೊಡನೆ ಹಾಡಲು
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆರವೇರುವುದು.

ತಾತ್ಪರ್ಯ.

ಬಾಲವತ್ಸಗಳುಳ್ಳ ಎಮ್ಮೆಗಳು ಪರೋಕ್ಷದಲ್ಲಿದ್ದ ತಂತಮ್ಮ ಕರುಗಳನ್ನು ಜ್ಞಾಪಿಸಿಕೊಂಡು, ಅವುಗಳಲ್ಲಿ ಪ್ರೀತಿಯಿಂದ ಕನಿಕರಗೊಂಡು ಆರ್ತಧ್ವನಿಮಾಡಿ, ತಮ್ಮನ್ನು ಉಣ್ಣುತ್ತೇ ನೆನದಕೂಡಲೆ ಕೆಚ್ಚಲುಗಳಿಂದ ಎಡೆಬಿಡದೆ ಹಾಲು ಪ್ರವಹಿಸಲು, ಮನೆಯೆಲ್ಲಾ ಇದರಿಂದ ಕೆಸರಾಯಿತು. ಇಂಥಾ ಗೋಸಂಪತ್ಸಮೃದ್ಧಿಯುಳ್ಳ ಗೋಪಾಲಕನ ಸಹೋದರಿಯೇ, ನಿನ್ನ ಭವನದ ಮುಂದಿನ ಪಡಸಾಲೆಯನ್ನು ಹೊಂದಿ ಬೆಳಗಿನಜಾವದ ಹನಿಯು ತಲೆಯಮೇಲೆಲ್ಲಾ ಬೀಳುತ್ತಿರಲು, ನಾವೆಲ್ಲಾ ಲಂಕಾರಾಜ್ಯಾಧಿಪತಿಯಾದ ಆ ದುಷ್ಟ ರಾವಣನನ್ನು ಕೋಪಿಸಿ ಕೊಂದ ಮನೋಹರನಾದ ಶ್ರೀರಾಮನನ್ನು ಕೊಂಡಾಡುತ್ತಿರುವಾಗ್ಯೂ, ನೀನು ಬಾಯಿಬಿಡುವುದೇ ಇಲ್ಲ! ಇದೇನು! ಇನ್ನುಮೇಲಾದರೂ ಏಳು, ಇದೇನು ಹುಚ್ಚುನಿದ್ರೆ! ಎಲ್ಲಾಮನೆಯವರೂ ತಿಳಿಯುವಹಾಗೆ ನೀನು ನಮ್ಮೊಡನೆ ಸೇರಿ ಹಾಡಲು, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಸ್ವಾಮಿನಾ, ಭಾಗವತಾಭಿಮಾನಸಿದ್ಧರೇ, ಈಗಲಾದರೂ [illegible] ದಯೆಮಾಡಿಸಬೇಕು. ಬಾಲಸಂತಾನವುಳ್ಳ ಶಿಷ್ಯರು "ತಮಗಳಿಗೂ ತಮ್ಮ ಸಂತಾನ[illegible] ಸ್ವಾಚಾರ್ಯರು ಭಗವದ್ಗುಣಾನುಭವವನ್ನು ಇನ್ನೂ ಮಾಡಿಸಲಿಲ್ಲವಲ್ಲಾ" ಎಂದು ಖೇದಗೊಂಡು ಪರಿತಾಪಪಟ್ಟು, ತದ್ವಿಷಯದಲ್ಲಿಯೇ ಧ್ಯಾನಾರೂಢರಾಗಿ, ಆ ಆಚಾರ್ಯರೇ ತಮ್ಮ ಪರಿವಾರಗಳಿಗೆ ಗುಣಾನುಭವವನ್ನು ಮಾಡಿಸುತ್ತಾರೆಂದೇ ಭಾವಿಸಿ, ಆ ಭಾವನಾಪ್ರಕರ್ಷದಿಂದ ಆಚಾರ್ಯಕಟಾಕ್ಷ ಬಂದೊಡನೆ, ಭಗವದ್ಗುಣಂಗಳು ನಿರರ್ಗಳವಾಗಿ ಪ್ರವಹಿಸಲು, ಇದೆಬ ವ್ಯಾಪಿನೆಗೆ

ಒಳಪಟ್ಟವರಿಗೆಲ್ಲಾ ಸಂಸಾರತಾಪಂಗಳು ತಣಿದುವು. ಇಂಥಾ ಶ್ಲಾಘ್ಯ ಸಂಪತ್ತನ್ನು ನೆಲೆಯಾಗಿ ಅನುಭವಿಸುವ ಆಚಾರ್ಯರ ಸಹೋದರರೇ, ಭಗವದ್ಭಾಗವತಗುಣಾನುಭವ ಪ್ರವಾಹದ ತುಂತುರುಗಳು ನಮ್ಮ ಮನಸ್ಸನ್ನು ಆಕರ್ಷಿಸುತ್ತಿದ್ದರೂ, ಅದರಲ್ಲಿ ಭೋಗ್ಯಬುದ್ಧಿಯನ್ನು ಈಗ ಮಾಡದೆಯೇ, ನಿಮ್ಮನ್ನು ಸಾಕ್ಷಾತ್ ಸೇವಿಸುವುದೇ ಮುಖ್ಯವೆಂದು ಯೋಚಿಸಿ, ನಿಮ್ಮ ಭವನದ ಮುಂಭಾಗದಲ್ಲಿ ನಾವೆಲ್ಲಾ ಬಂದು ನಿಂತಿದ್ದೇವೆ. ಜನನಮರಣಾದಿಗಳುಳ್ಳ ಈ ಸಂಸಾರಕ್ಕೆ ಕಾರಣವಾದ ಅಹಂಕಾರವನ್ನು ನಿರ್ಮೂಲವಾಗಿ ನಾಶಗೊಳಿಸುವ ನಮ್ಮ ಮನೋವಲ್ಲಭನಾದ ಶ್ರೀಮನ್ನಾರಾಯಣನ ದಿವ್ಯನಾಮ ಸಂಕೀರ್ತನವನ್ನು ನಿಮಗೆ ಕೇಳುವಂತೆಯೇ ಮಾಡಿದಾಗ್ಯೂ, ನೀವು ಇನ್ನೂ ಎಚ್ಚರಗೊಳ್ಳಲಿಲ್ಲವಲ್ಲಾ! ಇದೇನು ಆಶ್ಚರ್ಯ! (ಇವರ ನಿದ್ರೆಯು ಸಂಸಾರಿಗಳ ನಿದ್ರೆಯಹಾಗೆ ಇದ್ದಲ್ಲಿ, ಸತ್ವೋದ್ರೇಕವಾಗಿರುವ ಈ ಕಾಲದಲ್ಲಿ ಅದು ಮುಗಿದುಹೋಗತಕ್ಕದ್ದಷ್ಟೆ; ಅಥವಾ ಸರ್ವೇಶ್ವರನ ಯೋಗನಿದ್ರೆಯಂತೆ ಇದ್ದಲ್ಲಿ, ಪರರ ಆರ್ತಿಯನ್ನು ಕೇಳಿದಕೂಡಲೆ ನೀಗತಕ್ಕದ್ದಲ್ಲವೇ! ಇವೆರಡೂಹಾಗೂ ಇಲ್ಲದಿರುವ ಕಾರಣ, ಈ ಭಾಗವತರ ನಿದ್ರೆಯು ಚರಮಪರ್ವನಿಷ್ಠರ ಆರ್ತಿಯನ್ನು ಕಂಡರೆ ಮಾತ್ರ ನೀಗುವಂತೆ ತೋರುವುದು; ಇಲ್ಲಿ ಅಂಥವರು ಯಾರೂ ಇಲ್ಲದಿರುವದರಿಂದ, ಇವರು ಎಚ್ಚರಗೊಳ್ಳಲಿಲ್ಲವೋ!) ಹೇಗಿದ್ದರೂ ಇರಲಿ, ಎಲೈ ಸ್ವಾಮಿನ್, ಭಗವದ್ವಿಷಯವು ಗೋಪ್ಯವಲ್ಲವಷ್ಟೆ; ಅದನ್ನು ಸರ್ವರೂ ತಿಳಿಯುವಹಾಗೆ ನೀವು ನಮ್ಮೊಡನೆ ಸೇರಿ ಕೊಂಡಾಡಲು, ನಮ್ಮ ಅದ್ವಿತೀಯವಾದ ಈ ಭಗವತ್ಕೈಂಕರ್ಯರೂಪ ವ್ರತವು ಸಾಂಗವಾಗಿ ನಡೆಯುವುದು.

---

Revered Sir! zealous in maintaining the dignity of devotees, be pleased to arise and join us now at least. A number of disciples having families of young children, were very much exercised in their minds on seeing themselves as well as their descendants uninitiated in the mysteries of the holy mantrâs by their spiritual teachers; and while penitently meditating upon the subject, they worked up their feelings so far in the same direction that their imagination was actually turned into a reality; so that they got into the belief that the preceptors finally *did* initiate their disciples in all the mysteries of the *Holy Word.* Under the influence of such a feeling, the grace of their spiritual preceptors did actually extend itself, so as to see the devotional influence spreading all over, and such of the human beings as were brought under its influence, were able to get rid of their sufferings. "Thou art the affectionate brother of such a preceptor, favoured with the above-mentioned renowned blessing. Attractive as it is, the stream of the influence of God's communion, we have come and congregated in thy court-yard, disregarding for the present such enjoyments, in the belief that the interview with a devotee of thy stamp is more important than all the rest. Strange! thou hast not yet awakened, though we have been reciting to thy hearing the holy names of our Lord Sri Krishna, the Destroyer of Ahankâra which is the cause of all our births and deaths and consequent sufferings." (What! could his sleep be similar to that generally enjoyed by ordinary mortals! If so, he should have got up by this time, as this is dawn when the principle of Satva appears in its full bloom; or if it was similar to the *Yoganidra* enjoyed by the gracious Lord of Lords, it would certainly come to an end as soon as the penitent cries of help on the part of his devotees are heard. As this is of neither description, the sleep of this Bhâgavata is not likely to be over, it would appear, unless he hears the brotherly cry or noise of a person of his own standing (in devotion). Is it possible that he did not awake, simply because he did not see any devotee of that description?) Be it as it may, my revered Sir, Theology is no secret science, we hope; if thou shouldst unite with us in singing the Glory of God for the benefit of all, we shall be in a fair way to bring the special vow to a successful fruition.

ಪುಳ್ಳಿನ್ವಾಯ್ಕೀಣ್ಡಾನೈಪ್ಪೊಲ್ಲಾವರಕ್ಕನೈ |
ಕ್ಕಿಳ್ಳಿಕ್ಕಳೈನ್ದಾನೈಕ್ಕೀರ್ತ್ತಿಮೈಪಾಡಿಪ್ಪೋಯ್ ||
ಪಿಳ್ಳೈಕಳೆಲ್ಲಾರುಂಪಾವೈಕ್ಕಳಂಪುಕ್ಕಾರ್ |
ವೆಳ್ಳಿಯೆೞುನ್ದುವಿಯಾೞುಮುಱಙ್ಗಿತ್ತು ||
ಪುಳ್ಳುಂಶಿಲಂಬಿನಕಾಣ್ಪೋದರಿಕ್ಕಣ್ಣಿನಾಯ್ |
ಕುಳ್ಳಕ್ಕುಳಿರಕ್ಕುಡೈನ್ದುನೀರಾಡಾದೇ ||
ಪಳ್ಳಿಕ್ಕಿಡತ್ತಿಯೋಪಾವಾಯ್ನೀನನ್ನಾಳಾಲ್ |
ಕಳ್ಳನ್ತವಿರ್ನ್ದುಕಲನ್ದೇಲೋರೆಂಪಾವಾಯ್ || ... ||೧೩||

ಪ್ರತಿಪದಾರ್ಥ.

ಪುಳ್ಳಿನ್—ಪಕ್ಷಿರೂಪವಾಗಿ ಬಂದ ಬಕಾಸುರನ
ವಾಯ್ಕೀಣ್ಡಾನೈ—ಬಾಯನ್ನು ಸೀಳಿದಂಥ
ಪೊಲ್ಲಾವರಕ್ಕನೈ—ದುಷ್ಟರಾಕ್ಷಸನಾದ ರಾವಣನನ್ನು
ಕಿಳ್ಳಿಕ್ಕಳೈನ್ದಾನೈ—ಶಿರಚ್ಛೇದನಮಾಡಿ ಕೊಂದಂಥ ಶ್ರೀ ರಾಮನನ್ನು
ಕೀರ್ತ್ತಿಮೈಪಾಡಿಪ್ಪೋಯ್—ಕೀರ್ತ್ತಿಸಿ ಹೊಗಳಿಕೊಂಡು ಹೋಗಿ
ಪಿಳ್ಳೈಕಳೆಲ್ಲಾರುಂ—ಗೋಪಸ್ತ್ರೀಯರೆಲ್ಲರೂ
ಪಾವೈಕ್ಕಳಂಪುಕ್ಕಾರ್—ಸಂಕೇತಮಾಡಿದ್ದ ಸ್ಥಳಕ್ಕೆ ಸೇರಿದರು
ವೆಳ್ಳಿಯೆೞುನ್ದು—ಶುಕ್ರನು ಉದಯಿಸಿ
ವಿಯಾೞುಮುಱಙ್ಗಿತ್ತು—ಗುರುವು ಅಸ್ತಮಿಸಿದನು
ಪುಳ್ಳುಂಶಿಲಂಬಿನಕಾಣ್—ಪಕ್ಷಿಗಳು ಉಲಿಯುತ್ತವಲ್ಲವೆ
ಪೋದರಿಕ್ಕಣ್ಣಿನಾಯ್—ಕಮಲದಲ್ಲಿರುವ ಭ್ರಮರದಂತೆ ಕಣ್ಣುಳ್ಳವಳೇ
ಕುಳ್ಳಕ್ಕುಳಿರಕ್ಕುಡೈನ್ದು—ತಣ್ಣಗೆ ಸ್ವಚ್ಛವಾದ ನೀರಿನಲ್ಲಿ ಅವಗಾಹಿಸಿ
ನೀರಾಡಾದೇ—ಸ್ನಾನಮಾಡದೆಯೇ
ಪಳ್ಳಿಕ್ಕಿಡತ್ತಿಯೋ—ಪರ್ಯಙ್ಕದಲ್ಲಿ ನಿದ್ರೆಮಾಡುವಿಯೋ
ಪಾವಾಯ್ನೀ—ಸುಂದರಿಯೇ, ನೀನು
ನನ್ನಾಳಾಲ್—ಇದುವ್ರತಕ್ಕೆ ಸುದಿವಸವಾಗಿರುವುದರಿಂದ
ಕಳ್ಳಂತವಿರ್ನ್ದು—ಈ ವಂಚನೆಯನ್ನು ಬಿಟ್ಟು
ಕಲನ್ದು—ನಮ್ಮೊಡನೆ ಸೇರಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಶುಭವಾಗಿ ತೀರ್ಗಡೆಯಾಗುವುದು.

## ತಾತ್ಪರ್ಯ.

ಪಕ್ಷಿರೂಪವಾಗಿಬಂದ ಬಕಾಸುರನ ವಕ್ತ್ರವನ್ನು ಶ್ರೀಕೃಷ್ಣನಾಗಿ ಸೀಳಿ ಕೊಂದಂಥವನಾಗಿಯೂ, ದುಷ್ಟರಾಕ್ಷಸನಾದ ರಾವಣನನ್ನೂ ಶಿರಚ್ಛೇದನಮಾಡಿ ಅವನ ವಂಶವನ್ನೇ ರಾಮಾವತಾರದಲ್ಲಿ ನಿರ್ಮೂಲಮಾಡಿದಂಥವನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಕೀರ್ತನೆಮಾಡಿಕೊಂಡು, ಗೋಪಸ್ತ್ರೀಯರೆಲ್ಲರೂ ಶ್ರೀಕೃಷ್ಣಸ್ವಾಮಿಯನ್ನು ಸೇರಲು ಸಂಕೇತಮಾಡಿದ್ದ ಸ್ಥಳಕ್ಕೆ ಆಗಲೇ ಹೋಗಿ ಸೇರಿದಾರೆ; ನೀನು ಇನ್ನೂ ಮಲಗಿದ್ದೀಯೇ! ಇದೋ ನೋಡು! ಶುಕ್ರನು ಉದಯಿಸಿ ಗುರುವು ಅಸ್ತಮಿಸಿದಾನೆ; ಪಕ್ಷಿಗಳೆಲ್ಲಾ ಉಲಿಯುತ್ತವೆ. ಕಮಲದಲ್ಲಿರುವ ಭ್ರಮರದಂತೆ ಕಣ್ಣುಳ್ಳವಳೇ, ತಣ್ಣಗೆ ಸ್ವಚ್ಛವಾದ ನೀರಿನಲ್ಲಿ ಶುಭ್ರವಾಗಿ ಅವಗಾಹಿಸಿ ಸ್ನಾನಮಾಡದೆಯೇ ಪರ್ಯಙ್ಕದಲ್ಲಿ ಹೀಗೆ ಇನ್ನೂ ನಿದ್ರೆಮಾಡುವಿಯೋ! ಎಲೈ ಸುಂದರಾಂಗಿಯೇ, ಇದು ವ್ರತಕ್ಕೆ ಸುದಿವಸವಾಗಿರುವುದರಿಂದ ಈ ವಂಚನೆಯನ್ನೆಲ್ಲಾ ಬಿಟ್ಟು ನಮ್ಮೊಡನೆ ನೀನು ಸೇರಲು, ಅದ್ವಿತೀಯವಾದ ಈ ನಮ್ಮ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಸ್ವರೂಪಜ್ಞಾನವನ್ನು ಅಱಿದು ನಿರ್ಭರರಾಗಿರತಕ್ಕ ಸ್ವಾಮಿಯೇ, ಎಚ್ಚೆತ್ತು ನಮ್ಮೊಡನೆ ಸೇರಬೇಕು ; ಸ್ವಾಶ್ರಿತರಿಗೆ ಅನುಭವ ವಿರೋಧಿಗಳಾದ ಕಾಮಾದಿದೋಷಂಗಳನ್ನು ಹೋಗಲಾಡಿಸುವಂಥ, ಮತ್ತು ದೇಹವೂ ಆತ್ಮವೂ ಸ್ವತಂತ್ರಗಳೆಂದು ಅಯಥಾರ್ಥ ಜ್ಞಾನವನ್ನು ಉಂಟುಮಾಡುವ ಅಹಂಕಾರವನ್ನು ನಿರ್ಮೂಲವಾಗಿ ನಿರಸನಮಾಡಿದಂಥ, ಸರ್ವೇಶ್ವರನ ಕಲ್ಯಾಣಗುಣಗಳನ್ನೇ ಧಾರಕವಾಗಿ ಎಣಿಸಿ ಕೊಣ್ಡಾಡುತ್ತಾ, ಎಲ್ಲರೂ ಸೇರತಕ್ಕ ಕಾಲಕ್ಷೇಪ ಗೋಷ್ಠಿಯನ್ನು ಈ ಅಭಿನವ ಭಾಗವತರು ಆಗಲೇ ಸೇರಿದರು ; ಪರಿಶುದ್ಧ ಜ್ಞಾನವು ತಲೆಯೆತ್ತಿ, ಅಜ್ಞಾನವು ನೀಗಿಹೋಯಿತು ; ಇನ್ನೂ ಇತರ ಭಾಗವತರು ತ್ವರೆಗೊಂಡು ಅಲ್ಲಿಗೇ ಹೋದರು. ಆದಕಾರಣ ಎಲೈ ಸ್ವಚ್ಛ ಜ್ಞಾನವುಳ್ಳವರೇ, ಭಗವದ್ವಿಶ್ಲೇಷದಿಂದ ಉಂಟಾದ ವ್ಯಸನ[illegible]ಶೇಷವಾಗಿ ನೀಗಿ ಹೋಗುವಹಾಗೆ ಕಾಲಕ್ಷೇಪಗೋಷ್ಠಿಗಳನ್ನು ಪ್ರವೇಶಿಸಿ, [illegible] ಭಗವದನುಭವವನ್ನು ಮಾಡದೆ ನೀವು ಮಾತ್ರ ಬೇಱೆಯಾಗಿ ಗುಣಾನುಭವವನ್ನು ಮಾಡುತ್ತೀರೋ ! ಹಾಗೆ ಮಾಡುವುದು ಸರಿಯೋ ? ಇದು ಸತ್ತ್ವೋದ್ರೇಕಕಾಲವಾಗಿರುವುದಱಿಂದ, ನೀವು ಬೇಱೆಯಾಗಿಯೇ ಗುಣಾನುಭವವನ್ನು ಮಾಡುವ ಮೋಸವನ್ನು ಬಿಟ್ಟು, ನಮ್ಮೊಡನೆ ಏಕಮನಸ್ಕರಾಗಿ ಕಲೆತು, ನಿಮಗಿರುವಂತೆ ನಮಗೂ ಸತ್ತೆಯನ್ನು (ಸದ್ಭಾವವನ್ನು) ಉಂಟುಮಾಡಿದರೆ, ನಮ್ಮ ಭಗವತ್ಕೈಂಕರ್ಯರೂಪವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆಱವೇಱುವುದು.

---

13. "Revered sir! who hast relinquished all earthly attachments on being conscious of thy real nature, be pleased to arise and join us. The newly initiated Bhâgavatâs have already reached the Congregation-hall (Kâlakshêpa Goshthi), singing praises in honor of the Almighty, That frees His devotees from the pernicious effects of their six common enemies i.e. passion, anger, covetousness, ignorance, delusion, and hatred, and that annihilates the power of Ahankâra (egoity) that has been the cause of giving His devotees a false impression regarding the apparent independence of the two *entities*,—Matter and Spirit. True knowledge having shewed itself, ignorance has disappeared. All learned devotees are bestirring themselves to reach the *hall* soon; hence arise, O saint of pure wisdom! What sir, thou dost not even speak! Art thou absorbed in holding communion with the Lord? How alone! without joining the rest in the *congregation-hall*, so that all may in one united band sing halleluiahs in praise of the Lord, and thus get rid of the disappointment we all suffered from, owing to our separation from our Patron! If thou art so absorbed, is it right on thy part to do so? As this is an auspicious hour when the principle of *satva* (*Divine Inspiration*) pervades everywhere, be pleased to give up thy present selfish method of holding communion with the Lord, and heartily join us, and make us real entities like thee, and then we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences." Thus continued the Bhâgavatâs.

ಉಙ್ಗಳ್ಪುೞೈಕ್ಕಡೈತ್ತೋಟ್ಟತ್ತುವಾವಿಯುಳ್ |
ಶೆಙ್ಗೞುನೀರ್ವಾಯ್ನೆಕಿೞ್ನ್ದಾಮ್ಬಲ್ವಾಯ್ಕೂಮ್ಬಿನಕಾಣ್
ಶೆಙ್ಗಲ್ಪೊಡಿಕ್ಕೂೞೈವೆಣ್ಪಲ್ತವತ್ತವರ್ |
ತಙ್ಗಳ್ತಿರುಕ್ಕೋಯಿಲ್ಶಙ್ಗಿಡುವಾನ್ಪೋದನ್ದಾರ್ ||
ಎಙ್ಗಳೈಮುನ್ನಮೆೞುಪ್ಪುವಾನ್ವಾಯ್ಪೇಶುಂ |
ನಙ್ಗಾಯೆೞುನ್ದಿರಾಯ್ನಾಣಾದಾಯ್ನಾವುಡೈಯಾಯ್
ಶಙ್ಗೊಡುಶಕ್ಕರಮೇನ್ದುನ್ದಡಕ್ಕೈಯನ್
ಪಙ್ಗಯಕ್ಕಣ್ಣಾನೈಪ್ಪಾಡೇಲೋರೆಂಪಾವಾಯ್ || ||೧೪||

## ಪ್ರತಿಪದಾರ್ಥ.

ಉಙ್ಗಳ್ಪುೞೈಕ್ಕಡೈ—ನಿಮ್ಮ ಹಿತ್ತಲಿನ
ತೋಟ್ಟತ್ತುವಾವಿಯುಳ್—ತೋಟದ ಕೊಳದಲ್ಲಿ
ಶೆಂ, ಕೞುನೀರ್—ಚೆನ್ನೆಯ್ದಿಲೆಯ ಪುಷ್ಪಗಳು
ವಾಯ್ನೆಕಿೞ್ನ್ದು—ಅಲರಿ
ಆಂಬಲ್ವಾಯ್—ಕನ್ನೆಯ್ದಿಲೇಪುಷ್ಪಗಳ ಬಾಯು
ಕೂಂಬಿನಕಾಣ್—ಮುಕುಳಿತವಾಯಿತು
ಶೆಙ್ಗಲ್ಪೊಡಿಕ್ಕೂೞೈ—ಕಾವೀಕಲ್ಲಿನ ಕೆಂಪು ಧೂಳಿಯಲ್ಲಿ ತೋಯ್ದ ವಸ್ತ್ರವುಳ್ಳ
ವೆಣ್ಪಲ್ತವತ್ತವರ್—ಶುಭ್ರ ದಂತವುಳ್ಳ ತಪಸ್ವಿಗಳು (ಸನ್ಯಾಸಿಗಳು)
ತಙ್ಗಳ್ತಿರುಕ್ಕೋಯಿಲ್—ತಂತಮ್ಮ ದೇವಾಲಯಗಳಲ್ಲಿ
ಶಙ್ಗಿಡುವಾನ್—ಆರಾಧನಸೂಚಕವಾಗಿ ಶಂಖಧ್ವಾನ ಮಾಡುವುದಕ್ಕೆ
ಪೋದನ್ದಾರ್—ಹೋಗುತ್ತಲಿದಾರೆ
ಎಙ್ಗಳೈಮುನ್ನಂ—ನಮ್ಮನ್ನು ಮೊದಲಿನಲ್ಲಿಯೇ
ಎೞುಪ್ಪುವಾನ್—ಎಬ್ಬಿಸುವುದಾಗಿ
ವಾಯ್ಪೇಶುಂ—ವಾಗ್ದಾನಮಾಡಿದ್ದ
ನಙ್ಗಾಯ್—ಸಂಪನ್ನೆಯೇ
ಎೞುನ್ದಿರಾಯ್—ಏಳು ಸಾಕು !
ನಾಣಾದಾಯ್—ಲಜ್ಜಾರಹಿತಳೇ
ನಾವುಡೈಯಾಯ್—ಬರೀ ಬರುಡೇಮಾತಿನವಳೇ
ಶಙ್ಗೊಡುಶಕ್ಕರಮೇನ್ದು—ಪಾಂಚಜನ್ಯದೊಡನೆ ಚಕ್ರಾಯುಧವನ್ನು ಧರಿಸಿರುವ
ತಡಕ್ಕೈಯನ್—ವಿಶಾಲವಾದ ಹಸ್ತಗಳುಳ್ಳ
ಪಙ್ಗಯಕ್ಕಣ್ಣಾನೈ—ಪಂಕಜನೇತ್ರನಾದ ಕೃಷ್ಣಸ್ವಾಮಿಯನ್ನು
ಪಾಡ—ಕೊಣ್ಡಾಡಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ತೀರ್ಗಡೆಯಾಗುವುದು.

## ತಾತ್ಪರ್ಯ.

ಎಲೈ ಸಖಿಯೇ, ಇದೇನು ಇನ್ನೂ ಮಲಗಿದ್ದಿ, ಬೇಗ ಏಳು ! ಬೆಳಗಾಗಿ ಎಷ್ಟೋ ಹೊತ್ತಾಯಿತೇ ! ಇಗೋ ! ನಿಮ್ಮ ಹಿತ್ತಲಿನ ತೋಟದ ಕೊಳದಲ್ಲಿಯೂ ಚೆನ್ನೆಯ್ದಿಲೆಯ ಪುಷ್ಪಗಳು ಅಲರಿರುವವು ; ಕನ್ನೆಯ್ದಿಲೆಯ ಪುಷ್ಪಗಳೆಲ್ಲಾ ಆಗಲೇ ಮುಕುಳಿತವಾಗಿ ಹೋದವು. ಕಾವೀಕಲ್ಲಿನ ಕೆಂಪು ಧೂಳಿಯಲ್ಲಿ ತೋಯ್ದ ವಸ್ತ್ರಗಳುಳ್ಳ ಶುಭ್ರದಂತರಾದ ಸನ್ಯಾಸಿಗಳು ತಂತಮ್ಮ ದೇವಾಲಯಂಗಳಲ್ಲಿ ಆರಾಧನಸೂಚಕವಾಗಿ ಶಂಖಧ್ವಾನಮಾಡುವುದಕ್ಕೆ ಹೋಗುತ್ತಲಿದಾರೆ. ಹೀಗೆ ಪ್ರಭಾತಸಮಯವನ್ನು ಸೂಚಿಸತಕ್ಕ ಕಾರ್ಯಗಳು ಎಲ್ಲೆಲ್ಲಿಯೂ ಜರಗುತ್ತಿದ್ದರೂ, ನೀನು ಇನ್ನೂ ಏಳಲಿಲ್ಲವಲ್ಲಾ ! ನಮ್ಮನ್ನೆಲ್ಲಾ ಮೊದಲಿನಲ್ಲಿಯೇ ಎಬ್ಬಿಸುವುದಾಗಿ ವಾಗ್ದಾನಮಾಡಿದ್ದ ಸಂಪನ್ನೆಯೇ, ಈಗಲಾದರೂ ಏಳು ! ಇದೇನು ! ಲಜ್ಜಾರಹಿತಳೇ ! ಬರೀ ವಾಗಾಡಂಬರವುಳ್ಳವಳೇ ! ಪಾಂಚಜನ್ಯವನ್ನು ಒಂದು ಹಸ್ತದಲ್ಲಿಯೂ ಚಕ್ರಾಯುಧವನ್ನು ಮತ್ತೊಂದು ಹಸ್ತದಲ್ಲಿಯೂ ಧರಿಸಿರುವ ಶ್ರೀಕೃಷ್ಣಸ್ವಾಮಿಯನ್ನು ನಾವೆಲ್ಲಾ ಸೇರಿ ಕೊಣ್ಡಾಡಲು, ನಮ್ಮ ಈ ಅದ್ವಿತೀಯವಾದ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಭಗವತ್ಸಂಬನ್ಧಘಟಕರಾದ ಚೇತನರೇ, ಜಾಗ್ರತೆಯಾಗಿ ದಯಮಾಡಿಸಬೇಕು. ಜ್ಞಾನಿಗಳಾದ ನಿಮಗೆ ವಿಹಾರಸ್ಥಾನವಾದ ತಿರುಮಂತ್ರದ ಮಧ್ಯದಲ್ಲಿ ವರ್ತಿಸುವ 'ನಮಃ' ಎಂಬಪದದಲ್ಲಿ ಪಾರತಂತ್ರ್ಯದ ಅರ್ಥವು ಪ್ರಕಾಶವಾಗಿ ತಲೆಯೆತ್ತಿಕೊಂಡಿತು; ಆದುದಱಿಂದ ಸ್ವಾತಂತ್ರ್ಯದ ಜ್ಞಾನವು ನಿರಸ್ತವಾಯಿತು. ರಾಗತ್ವ ವಿಶಿಷ್ಟವಾದ ಶೇಷತ್ವಜ್ಞಾನವುಳ್ಳ ಮಂದಸ್ಮಿತರಾದ ಪ್ರಪನ್ನಾಧಿಕಾರಿಗಳು ತಂತಮ್ಮ ಭಗವತ್ಸನ್ನಿಧಿಗಳಿಗೆ ಆರಾಧನಕ್ಕಾಗಿ ಹೋಗುತ್ತಿರುವರು. ನಾವು ಅಪೇಕ್ಷಿಸುವುದಕ್ಕೆ ಮುಂಚೆಯೇ ನಮಗೆ ಜ್ಞಾನೋಪದೇಶ ಮಾಡುವುದಾಗಿ ಅಪ್ಪಣೆಕೊಡಿಸಿದ ಸ್ವಾಮಿಯೇ, ನೀವು ಭರವಸೆ ಹೇಳಿದಂತೆ ಈಗ ನಡಿಸಬೇಡವೇ! ಮಾಡಿದ ವಾಗ್ದಾನಕ್ಕೆ ಅನುಸಾರವಾಗಿ ಆಚರಣೆಯಿಲ್ಲದಿದ್ದರೆ ತಮ್ಮಂತಹ ದೊಡ್ಡವರಿಗೆ ಇದು ಲಜ್ಜಾಸ್ಪದವಲ್ಲವೆ? ಸರ್ವೇಶ್ವರನನ್ನೂ ಮೋಹಗೊಳಿಸುವ ಮಧುರ ವಾಕ್ಕುಳ್ಳವರೇ, ಶಂಖಚಕ್ರಾಲಂಕೃತನಾದ ಆಶ್ರಿತವಾತ್ಸಲ್ಯವುಳ್ಳ ಶ್ರೀಮನ್ನಾರಾಯಣನ ದಿವ್ಯ ನಾಮಂಗಳನ್ನು "ತಿರುವಾಯ್ ಮೊಳಿ" ಯ ಮೂಲಕ ನೀವು ನಮ್ಮೊಡನೆ ಸಂಕೀರ್ತನ ಮಾಡಲು, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪವ್ರತವು ಸಾಂಗವಾಗಿಯೂ ಶುಭವಾಗಿಯೂ ನೆಱವೇಱುವುದು.

---

14. "Revered sir, cementer of cordial relationship between ourselves and the Lord! be pleased to arise and join us soon. The noble idea of *dependence* implied by the word '*Namas*' found in the middle of the sacred *mantra*, which thou deemest as thy best pleasure-garden, has now shewn itself prominently; while the mistaken idea of *independence* has been removed. The Almighty's devotees, of cheerful countenance, imbued with the spirit of entire *dependence* upon, and full ardour towards, the Lord, are proceeding towards their own temples to worship their Lord. O venerable Sir, that hadst been pleased to promise to instruct us in the *True Wisdom* before our making such a request to thee, art thou not bound to keep up thy word? It is not a matter for regret and shame, if great men of thy stamp do not bring to practice what they promise to fulfil! O possessor of sweet speech, that would enchantest even the Lord! if thou be pleased to join us in singing hymns of praise through the sacred 'Tiruvoimoli' dedicated to the Lord 'Nârâyaṇa,' adorned with the sacred discus and the thundering conch-shell, and beloved unto His devotees, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences." Thus continued the Bhâgavatâs.

ಎಲ್ಲೇಯಿಳಙ್ಗಿಳಿಯೇಯಿನ್ನಮುಱಙ್ಗುದಿಯೋ ।
ಶಿಲ್ಲೆನ್ಱಳೈಯೇನ್ಮಿನಙ್ಗೈಮೀರ್ಪೋದರುಕಿನ್ಱೇನ್ ॥
ವಲ್ಲೈಯುನ್ಕಟ್ಟುರೈಕಳ್ಪಣ್ಡೇಯುನ್ವಾಯಱಿದುಂ ।
ವಲ್ಲೀರ್ಕಳ್ನೀಙ್ಗಳೇನಾನೇತಾನಾಯಿಡುಕ ॥
ಒಲ್ಲೈನೀಪೋದಾಯುನಕ್ಕೆನ್ನವೇಱುಡೈಯೈ ।
ಎಲ್ಲಾರುಂಪೋನ್ದಾರೋಪೋನ್ದಾರ್ಪೋನ್ದೆಣ್ಣಿಕ್ಕೊಳ್ ॥
ವಲ್ಲಾನೈಕೊನ್ಱಾನೈಮಾಱ್ಱಾರೈಮಾಱ್ಱಳಿಕ್ಕ ।
ವಲ್ಲಾನೈಮಾಯನೈಪ್ಪಾಡೇಲೋರೆಂಪಾವಾಯ್ ॥ ... ॥೧೫॥

ಪ್ರತಿಪದಾರ್ಥ.

ಎಲ್ಲೇಇಳಙ್ಗಿಳಿಯೇ—ಎಲೌ, ಬಾಲಶುಕದಂತೆ ಮನೋಹರಳೇ
ಇನ್ನಮುಱಙ್ಗುದಿಯೋ—ಇನ್ನೂ ನಿದ್ರೆಮಾಡುತ್ತಾ ಇರುವಿಯೋ
ಶಿಲ್ಎನ್ಱಳೈಯೇನ್ಮಿನ್—ಕಿಡಿಕಿಡಿ ಎಂದು ಕಟುವಚನದಿಂದ ನನ್ನನ್ನು ಕೂಗಬೇಡಿರಿ
ನಙ್ಗೈಮೀರ್—ಶ್ಲಾಘ್ಯಗುಣವತಿಯರೇ
ಪೋದರುಕಿನ್ಱೇನ್—ಇಗೋ ನಾನು ಬಂದುಬಿಟ್ಟೆ
ವಲ್ಲೈಉನ್ಕಟ್ಟುರೈಕಳ್—ಸಮರ್ಥೆಯಾದ ನಿನ್ನ ಭರವಸದ ಮಾತುಗಳನ್ನು
ಪಣ್ಡೇ—ಪೂರ್ವದಿಂದಲೂ
ಉನ್ವಾಯ್—ನಿನ್ನ ವಾಗಾಡಂಬರವನ್ನು
ಅಱಿದುಂ—ಬಲ್ಲೆವು
ವಲ್ಲೀರ್ಕಳ್ನೀಙ್ಗಳೇ—ಮಾತು ಬಲ್ಲವರು ನೀವೇಸರಿ
ನಾನೇತಾನ್ಆಯಿಡುಕ—ನಾನೇ ಆದರೂ ಆಗಲಿ, ಚಿಂತೆಯಿಲ್ಲ
ಒಲ್ಲೈನೀಪೋದಾಯ್—ಶೀಘ್ರವಾಗಿ (ನಮ್ಮ ಗುಂಪನ್ನು) ನೀನೂ ಸೇರಬೇಕು
ಉನಕ್ಕು—ನಿನಗೆ
ಎನ್ನವೇಱುಉಡೈಯೈ—ಇನ್ನು ಬೇಕೇ ಏನು(ಉದ್ದೇಶ್ಯ) ಉಳ್ಳವಳಾಗಿದ್ದೀ
ಎಲ್ಲಾರುಂಪೋನ್ದಾರೋ—ಎಲ್ಲರೂ ಬಂದುಬಿಟ್ಟರೋ
ಪೋನ್ದಾರ್—ಬಂದಿದಾರೆ
ಪೋನ್ದುಎಣ್ಣಿಕ್ಕೊಳ್—ಬಂದು ಲೆಕ್ಕ ನೋಡಿಕೋ
ವಲ್ಲಾನೈಕೊನ್ಱಾನೈ—ಬಲಿಷ್ಠನಾದ ಕುವಲಯಾಪೀಡವೆಂಬ ಮತ್ತಗಜವನ್ನು ಕೊಂದಂಥ
ಮಾಱ್ಱಾರೈ—ಶತ್ರುಗಳ
ಮಾಱ್ಱಳಿಕ್ಕವಲ್ಲಾನೈ—ದರ್ಪವನ್ನು ನಾಶಮಾಡಲು ಸಮರ್ಥನಾದ
ಮಾಯನೈ—ಆಶ್ಚರ್ಯಗುಣಚೇಷ್ಟಿತನಾದ ಶ್ರೀಕೃಷ್ಣಸ್ವಾಮಿಯನ್ನು
ಪಾಡ—ನಾವೆಲ್ಲರೂಸೇರಿ ಕೊಂಡಾಡಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು

ತಾತ್ಪರ್ಯ.

"ಎಲೌ ಬಾಲಶುಕದಂತೆ ಮನೋಹರವಾದ ಧ್ವನಿಯುಳ್ಳವಳೇ, ಇನ್ನೂ ನಿದ್ರೆಮಾಡುತ್ತಾ ಇರುವಿಯೋ!" ಎಂದುದಕ್ಕೆ ಅವಳು—ಶ್ಲಾಘ್ಯ ಗುಣವತಿಯರೇ, ಕಿಡಿಕಿಡಿ ಎಂದು ಕಟುವಚನದಿಂದ ನನ್ನನ್ನು ಕೂಗಬೇಡಿರಿ, ಇಗೋ! ನಾನು ಬಂದುಬಿಡುತ್ತೇನೆ ಎಂದಳು. ಹೀಗೆಂದುದಕ್ಕೆ ಅವರು—ಸಮರ್ಥೆಯಾದ ನಿನ್ನ ಭರವಸದ ಮಾತುಗಳನ್ನೂ ನಿನ್ನ ವಾಗಾಡಂಬರವನ್ನೂ ಪೂರ್ವದಿಂದಲೂ ಬಲ್ಲೆವು, ಎಂದರು. ಅನಂತರ ಅವಳು—ಮಾತು ಬಲ್ಲವರು ನೀವೇಸರಿ, ನಾನಲ್ಲ; ಅಥವಾ ನಾನೇ ಆದರೂ ಆಗಲಿ, ಚಿಂತೆಯಿಲ್ಲ; ಈಗ ಏನು ಆಗತಕ್ಕದ್ದು ಹೇಳಿ, ಎಂದು ಬದರಿ ಮಾತನಾಡಿದಳು. ಅದಕ್ಕೆ ಅವರು—ಎಲೈ ಚತುರೆಯೇ, ಶೀಘ್ರವಾಗಿ ನಮ್ಮ ಗುಂಪನ್ನು ನೀನೂ ಸೇರಬೇಕು; ನಿನಗೆಮಟ್ಟಿಗೆ ಇನ್ನು ಬೇಕೇ ಏನಾದರೂ ಉದ್ದೇಶ್ಯವುಳ್ಳವಳಾಗಿದ್ದೀಯೋ?" ಹೀಗೆಂದು ಹೇಳಿದ್ದಕ್ಕೆ ಅವಳು—ಹಾಗಾದರೆ ಎಲ್ಲರೂ ಬಂದುಬಿಟ್ಟರೋ, ಎಂದು ಕೇಳಲು, ಅವರು—ಇಲ್ಲಿ ಎಲ್ಲರೂ ಬಂದಿದಾರೆ; ನೀನೇ ಬಂದು ಲೆಕ್ಕ ಮಾಡುವಳಾಗು; ನಾವೆಲ್ಲರೂ ಸೇರಿ ಬಲಿಷ್ಠನಾದ ಕುವಲಯಾಪೀಡವೆಂಬ ಮತ್ತಗಜವನ್ನು ಕೊಂದಂಥವನಾಗಿಯೂ ಶತ್ರುಗಳ ದರ್ಪವನ್ನು ನಾಶಮಾಡಲು ಸಮರ್ಥನಾಗಿಯೂ ಇರುವ ಆಶ್ಚರ್ಯ ಗುಣಚೇಷ್ಟಿತನಾದ ಶ್ರೀಕೃಷ್ಣಸ್ವಾಮಿಯನ್ನು ಕೊಂಡಾಡಲು, ನಮ್ಮ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು, ಎಂದು ಅವಳಿಗೆ ಪ್ರತ್ಯುತ್ತರಹೇಳಿದರು.

### ಸ್ವಾಪದೇಶಾರ್ಥ—ರಹಸ್ಯಾರ್ಥ.

"ಭಾಗವತಾಭಿನಿವೇಶವುಳ್ಳ ಸ್ವಾಮಿಯೇ. ಇದೇನು ಆಶ್ಚರ್ಯ! ನಾವುಗಳೆಲ್ಲಾ ಎದ್ದು ಇಲ್ಲಿಗೆ ಬಂದಮೇಲೆ ಕೂಡ ನೀವು ಇನ್ನೂ ಪ್ರಬುದ್ಧರಾಗದಿರುವುದೇ!" ಹೀಗೆ ಹೇಳಿದ ಭಾಗವತರನ್ನು ಕುರಿತು ಅವರು—ನೀವುಗಳು ಹೀಗೆ ಹೇಳುವುದು ಭಗವದ್ಗುಣಾನುಭವದಲ್ಲಿ ಉದ್ಯುಕ್ತನಾಗಿದ್ದ ನನಗೆ ಅಭ್ಯಂತರವಾಗಿದೆ; ಆದಕಾರಣ ನೀವು ಸ್ವಲ್ಪ ತಡೆಯಿರಿ; ನಾನು ಬಂದುಬಿಡುವೆನು, ಎಂದು ಉತ್ತರಕೊಟ್ಟರು. ಅದಕ್ಕೆ ಆ ಭಾಗವತರು—ನೀವು ರಹಸ್ಯಾರ್ಥಗಳನ್ನು ಹೀಗೆ ಗೋಪ್ಯವಾಗಿ ಹೇಳುವ ಸಾಮರ್ಥ್ಯವು ನಿಮಗೆ ಉಂಟೆಂಬ ಸಂಗತಿಯನ್ನು ನಾವು ಪೂರ್ವದಿಂದಲೂ ತಿಳಿದಿದ್ದೇವೆ, ಎಂದು ಹೇಳಲು; ಅವರು—ನಾನು ಮಾಡುತ್ತಿದ್ದ ಗುಣಾನುಭವಕ್ಕೆ ನೀವು ವಿರೋಧವನ್ನು ಮಾಡಿದರೂ, ನಿಮ್ಮಮೇಲೆಯೇ ತಪ್ಪನ್ನು ಹೊರಿಸಿಕೊಳ್ಳದೆ ನನ್ನನ್ನು ಶ್ಲಾಘಿಸಿ ಹೇಳತಕ್ಕ ಸಾಮರ್ಥ್ಯವೂ ನಿಮ್ಮಲ್ಲಿಯೇ ಇದೆ; ಆದರೂ ಭಾಗವತಶೇಷತ್ವವು ಸ್ವರೂಪವಾದುದರಿಂದ ನೀವು ಆರೋಪಿಸುವ ದೋಷವನ್ನು ನಾನೇ ಒಪ್ಪಿಕೊಳ್ಳತಕ್ಕದ್ದು ನನಗೆ ಕರ್ತವ್ಯ, ಎಂದು ಪ್ರತ್ಯುತ್ತರ ಹೇಳಿದರು. ಅದನ್ನು ಕೇಳಿ ಆ ಭಾಗವತರು—ಸ್ವಾಮಿನ್, ಯಾವುದೂ ಹೇಗಾದರೂ ಇರಲಿ, ನೀವು ನಮ್ಮೊಡನೆ ಕೂಡಲೆ ಸೇರಬೇಕು, ಹೀಗೆ ಭಗವದ್ಗುಣಾನುಭವವನ್ನು ಏಕಾಂಗಿಯಾಗಿ ಮಾಡುವುದು ಸರಿಯೇ? ಎಂದುದಕ್ಕೆ, ಅವರು—ಹಾಗಾದರೆ ಎಲ್ಲರೂ ಕಾಲಕ್ಷೇಪಗೋಷ್ಠಿಗೆ ಬಂದು ಸೇರಿದರೂ, ಎಂದು ಪ್ರಶ್ನೆಮಾಡಿದರು. ಇದಕ್ಕೆ ಆ ಭಾಗವತರು—ಇಲ್ಲಿ ಎಲ್ಲರೂ ಬಂದು ಸೇರಿದಾರೆ, ತಾವೇ ಬಂದು ನೋಡಬಹುದು, ಎಂದುದಕ್ಕೆ, ಅವರು—ಇನ್ನು ಮೇಲೆ ನಾವು ಮಾಡತಕ್ಕದ್ದೇನೆಂದು ಕೇಳಲು, ಆ ಭಾಗವತರು—ಸ್ವಾಮಿ, ಸ್ವಪ್ರಯತ್ನದಿಂದ ನಿರಸನಮಾಡಲು ಅಸಾಧ್ಯವಾಗಿಯೂ, ಪ್ರಾಯಶ್ಚಿತ್ತಾದಿಗಳಿಂದ ನಿವರ್ತಿಸಲು ಆಗದಂತೆಯೂ ಇರುವ ಅಹಂಕಾರವನ್ನು ನಾಶಮಾಡಿ, ಮತ್ತು ಕಾಮಕ್ರೋಧಾದ್ಯರಿಷಡ್ವರ್ಗಂಗಳನ್ನು ನಿರ್ಮೂಲಮಾಡಲು ಸಮರ್ಥನಾದ ಆಶ್ರಿತ ಪರತಂತ್ರನಾದ ಶ್ರೀಮನ್ನಾರಾಯಣನನ್ನು ನಾವೆಲ್ಲಾ ಸೇರಿ ಕೊಂಡಾಡಲು, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪ ವ್ರತವು ಶುಭವಾಗಿ ನೆರವೇರುವುದು, ಎಂದು ವಿಜ್ಞಾಪಿಸಿದರು.

---

15. "Revered sir! firmly attached to the Bhâgavatâs, what wonder!" said the Vaishnavâs, "still asleep even after our arrival here!" "Your utterances," returned the saint, "are officious hindrance to my uninterrupted enjoyment of the Lord in which I am engaged; hence wait, I shall be with you soon." "We have been already aware" said the party, "that thou art specially good at expressing mystically the 'Rahasyârthâs' (*sacred thoughts known only to the initiated*);" to which he rejoined "Though you disturbed me in the work in which I was engaged, the ability to extol me to the skies without throwing the blame on yourselves rests with you alone; however, as it should be the bounden duty of every real devotee to behave most humbly and submissively towards his brother devotees, I shall simply acknowledge what you wish to attribute to me." "Sir, be that as it may" exclaimed one of the party, "be pleased to join us at once; is it fair that thou shouldst alone hold communion with the Lord leaving us behind?" On which the saint questioned them thus, "Have all others reached the congregation-hall?" To which the party made answer, "All have already reached; if thou please, thou mayest come and see it thyself." "Then what is our next business to be done?" added the saint, when the whole party rejoined. "Sir, if we should all join, as one united band, to sing hymns of praise dedicated to the Lord Nârâyana, the *Servant* of His devotees, and Uprooter of the six common enemies, i.e., passion, anger, covetousness &c., and the Destroyer of Ahankâra (Egoity) which cannot be got rid of by ordinary human efforts, or by expiatory penances, we shall be in a fair way to bring the special vow to a successful fruition".

ನಾಯಕನಾಯ್ನಿನ್ರನನ್ದಗೋಪನುಡೈಯ |
ಕೋಯಿಲ್ಕಾಪ್ಪಾನೇಕೊಡಿತ್ತೋನ್ರುಂತೋರಣ ||
ವಾಯಿಲ್ಕಾಪ್ಪಾನೇಮಣಿಕ್ಕದವಂತಾಳ್ತಿಱವಾ |
ಯಾಯರ್ಶಿಱುಮಿಯರೋಮುಕ್ಕಱೈಪಱೈ ||
ಮಾಯನ್ಮಣಿವಣ್ಣನ್ನೆನ್ನಲೇವಾಯ್ನೇರ್ನ್ದಾನ್ |
ತೂಯೋಮಾಯ್ವನ್ದೋನ್ತುಯಿಲೆೞಪ್ಪಾಡುವಾನ್ ||
ವಾಯಾನ್ಮುನ್ನಮುನ್ನಮಾತ್ತಾದೇಯಮ್ಮಾನೀ |
ನೇಯನಿಲೈಕ್ಕದವ್ವನೀಕ್ಕೇಲೋರೆಂಬಾವಾಯ್ || ... ||೧೬||

## ಪ್ರತಿಪದಾರ್ಥ.

ನಾಯಕನಾಯ್‌ನಿನ್ರ—ನಮಗೆಲ್ಲಾ ನಾಯಕನಾಗಿ ನಿಂತ
ನಂದಗೋಪನುಡೈಯ—ಶ್ರೀನಂದಗೋಪನ
ಕೋಯಿಲ್ಕಾಪ್ಪಾನೇ—ಅರಮನೆಯನ್ನು ಕಾಯುವವ[ನೇ
ಕೊಡಿತ್ತೋನ್ರುಂ—ಧ್ವಜಪಟಗಳು ಬೆಳಗುವ
ತೋರಣವಾಯಿಲ್‌ಕಾಪ್ಪಾನೇ—ತೋರಣಂಗಳು ಕಟ್ಟಿರುವ ಬಾಗಿಲನ್ನು ಕಾಯುವವನೇ
ಮಣಿಕ್ಕದವಂ—ಸುಂದರವಾದ ಬಾಗಿಲು ವಾಡದ
ತಾಳ್ತಿಱವಾಯ್—ತಾಪಾಳನ್ನು ತೆಗೆ
ಆಯರ್—ಮುಗ್ಧರಾದ ಗೋಪಾಲರ
ಶಿಱುಮಿಯರೋಮುಕ್ಕು—ಬಾಲೆಯರಾದ ನಮಗೆ
ಅಱೈಪಱೈ—ಶಬ್ದಮಾಡುವ ಪಟಹವನ್ನು (ಇಷ್ಟಾರ್ಥವನ್ನು)
ಮಾಯನ್‌ಮಣಿವಣ್ಣನ್—ಆಶ್ಚರ್ಯಗುಣಚೇಷ್ಟಿತನಾದ ನೀಲಮೇಘಶ್ಯಾಮನು
ನೆನ್ನಲೇವಾಯ್ ನೇರ್ನ್ದಾನ್—ನೆನ್ನೆಯೇ ಕೊಡುವುದಾಗಿ ವಾಗ್ದಾನಮಾಡಿದಾನೆ
ತೂಯೋಮಾಯ್‌ವನ್ದೋಂ—(ಪ್ರಯೋಜನಾಂತರಾಪೇಕ್ಷೆಯಿಲ್ಲದೆ) ಶುದ್ಧಮನಸ್ಕರಾಗಿ ಬಂದೆವು
ತುಯಿಲೆೞಪ್ಪಾಡುವಾನ್—ಸುಪ್ರಭಾತವನ್ನು ಹಾಡುವುದಕ್ಕೋಸ್ಕರ
ವಾಯಾಲ್—ನಿನ್ನ ಬಾಯಿಂದ
ಮುನ್ನಮುನ್ನಮಾತ್ತಾದೇ—ಮೊಟ್ಟಮೊದಲು ತಡೆಯದೆ
ಅಮ್ಮಾನೀ—ನಾಯಕನಾದ ನೀನು
ನೇಯ—ಪ್ರೀತಿಯಾಗಿ, ಅನುಕೂಲನಾಗಿ
ನಿಲೈಕ್ಕದವ್ವನೀಕ್ಕು—ಭದ್ರವಾದ ಬಾಗಿಲನ್ನು ತೆಗೆ
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ, ಆಯ್—ನಮ್ಮ ವ್ರತವು ಶುಭವಾಗಿ ನೆರವೇರುವುದು

## ತಾತ್ಪರ್ಯ.

“ನಮಗೆಲ್ಲಾ ನಾಯಕನಾದ ಆ ಶ್ರೀನಂದಗೋಪನ ಅರಮನೆಯ ದ್ವಾರಪಾಲಕನೇ, ನಮಗೆ ಒಳಗೆ ಹೋಗಲು ಅಪ್ಪಣೆಯನ್ನು ಕೊಡು” ಎಂದು ಹೇಳಿ, ಅವನ ಅನುಮತಿಯನ್ನು ಪಡೆದನಂತರ ತೋರಣದ ಬಾಗಿಲಹತ್ತಿರ ಹೋಗಿ—ಎಲೈ ಧ್ವಜಂಗಳುಳ್ಳ ತೋರಣ ಬಾಗಿಲಿನ ದ್ವಾರಪಾಲಕನೇ, ಸುಂದರವಾದ ಬಾಗಿಲು ವಾಡದ ತಾಪಾಳನ್ನು ತೆಗೆ ; ಮುಗ್ಧ ಗೋಪಾಲರ ಬಾಲೆಯರಾದ ನಮಗೆ ಶಬ್ದಮಾಡುವ ಪಟಹವನ್ನು (ಅಪೇಕ್ಷಿತಂಗಳನ್ನು) ಆಶ್ಚರ್ಯಗುಣಚೇಷ್ಟಿತನಾಗಿಯೂ ನೀಲಮೇಘಶ್ಯಾಮನಾಗಿಯೂ [illegible] ಸ್ವಾಮಿಯು ನೆನ್ನೆಯೇ ಕೊಡುವುದಾಗಿ ವಾಗ್ದಾನಮಾಡಿದಾನೆ. ಪ್ರಯೋಜನಾಂತರಾಪೇಕ್ಷೆಯಿಲ್ಲದೆ ಶುದ್ಧಮನಸ್ಕರಾಗಿ ಸ್ವಾಮಿಗೆ ಸುಪ್ರಭಾತವನ್ನು ಹಾಡಲು ಬಂದಿದೇವೆ ; ಎಲೈ ನಾಯಕನೇ, ನೀನು ನಿನ್ನ ಬಾಯಿಂದ ಯಾವ ತಡೆಯನ್ನೂ ಮಾಡದೆ ನಮಗೆ ಅನುಕೂಲನಾಗಿ, ಭದ್ರವಾದ ಈ ಬಾಗಿಲು ವಾಡವನ್ನು ತೆಗೆ ; ಆಗ ನಮ್ಮ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ತಾವೇ ಶೇಷಿತ್ವಕಾಷ್ಠೆಯಲ್ಲಿ ನಿಂತಿರುವ ಆಚಾರ್ಯರ ಸಂಬಂಧವನ್ನು ಉಂಟುಮಾಡುವರ ಘಟಕನೆ, ಮತ್ತು ಆಚಾರ್ಯ ಪ್ರಾವಣ್ಯವನ್ನು ಸೂಚಿಸುವ ತಿರುಮಂತ್ರಾರ್ಥದ ವಿಚಾರಂಗಳನ್ನು ತನ್ನ ಸದುಪದೇಶದಿಂದ ನಮಗಳಿಗೆ ವಿಶದೀಕರಿಸಿ ರಕ್ಷಿಸುವವನೇ, ಶ್ಲಾಘ್ಯವಾದ ಕೇವಲಾತ್ಮಸ್ವರೂಪಾನುಭವವನ್ನೂ ಅದರ ಮೂಲಕ ಬರುವ ಸ್ವಾತಂತ್ರ್ಯ ಪ್ರವೃತ್ತಿಯನ್ನೂ ನಿವೃತ್ತಿಮಾಡಿ ಕೃಪೆಮಾಡಬೇಕು. ಸಾಕ್ಷಾನ್ನಾರಾಯಣನೇ ಉಪಾಯೋಪೇಯನೆಂದು ಅಧ್ಯವಸಾಯಮಾಡಿಕೊಂಡಿರುವ ವಂಶದಲ್ಲಿ ಹುಟ್ಟಿ ಅನನ್ಯಾರ್ಹಶೇಷರಾದ ನಮಗಳಿಗೆ ಆಶ್ರಿತ ವಾತ್ಸಲ್ಯಪೂರ್ಣನಾದ ಶ್ರೀಕೃಷ್ಣಸ್ವಾಮಿಯು ನಮ್ಮ ಪುರುಷಾರ್ಥಂಗಳನ್ನು ನೆರವೇರಿಸಿ ಕೊಡುವುದಾಗಿ ಪೂರ್ವದಲ್ಲಿಯೇ ಭಗವದ್ಗೀತಾದಿಗ್ರಂಥಗಳಲ್ಲಿ ಹೇಳಿರುವನು; ಆದಕಾರಣ ಪ್ರಯೋಜನಾಂತರದಲ್ಲಿ ಅಪೇಕ್ಷೆಯಿಲ್ಲದೆ ಅವನಿಗೆ ಸುಪ್ರಭಾತಸೇವೆಯನ್ನು ಕೊಂಡಾಡುವುದಕ್ಕೋಸ್ಕರ ಇಲ್ಲಿ ಬಂದು ನಿಂತಿದೇವೆ. ನಮಗಳಿಗೆಲ್ಲಾ ಘಟಕನಾಗಿಯೂ ಮುಖಂಡನಾಗಿಯೂ ಇರುವ ನೀನು ಮೊಟ್ಟಮೊದಲೇ ಯಾವ ನಿಷೇಧವನ್ನೂ ಮಾಡದೆ ನಮಗೆ ಅನುಕೂಲನಾಗಿರಬೇಕು. ಸ್ವರೂಪವೈಲಕ್ಷಣ್ಯವನ್ನು ಮರೆಸದೆ ಶ್ರೀಕೃಷ್ಣಸ್ವಾಮಿಯ ಸೇವೆಯನ್ನು ನೀನು ಸಕಾಲದಲ್ಲಿ ಮಾಡಿಸಿದರೆ, ನಮ್ಮ ಈ ಅದ್ವಿತೀಯವಾದ ಭಗವತ್ಕೈಂಕರ್ಯರೂಪ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

---

16. "Revered brother! who canst ably introduce us to our preceptor that stands forth as a *saviour* (addressing a trusted and beloved disciple of the Achárya,), and thou protector! (turning to another disciple,) a great proficient in the sacred mysteries, that canst explain by thy sound teaching the great truths imbedded in the "*Tirumantra,*" be pleased to favour us with so much light that we may give up as transcient the mere act of *enjoying the soul,* though excellent in itself, and the false position of the *independence* secured thereby. To us who trace our descent to noble birth, and who have therefore taken shelter with Him as the sole end and aim of *salvation,* the Lord Srikrishna has been kind enough to already promise, in Gita and other sacred writings, that He would be graciously pleased to fulfil our desires. Hence we have come here to sing hymns of prayer during morning service, and with no other purpose. As our leader and guide, we have to request thee not to throw any obstacles on our humble efforts, but to cooperate with us. If thou condescend to secure for us in this opportune hour the glorious *presence* of Lord Srikrishna by removing the veil of ignorance that usually obscures our true nature, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences." Thus added the Bhágavatás.

ಅಂಬರಮೇತಣ್ಣೀರೇಶೋಱೇಯಱಂಶೆಯ್ಯುಂ |
ಎಂಬೆರುಮಾನನ್ದಗೋಪಾಲಾವೆೞುನ್ದಿರಾಯ್ ॥
ಕೊಂಬನಾರ್ಕ್ಕೆಲ್ಲಾಂಕೊೞುನ್ದೇಕುಲವಿಳಕ್ಕೇ |
ಯೆಂಬೆರುಮಾಟ್ಟಿಯಶೋದಾಯಱಿವುಱಾ ॥
ಯಂಬರಮೂಡಱುತ್ತೋಙ್ಗಿಯುಲಕಳನ್ದ |
ವುಂಬರ್ಕೋಮಾನೇಯುಱಙ್ಗಾದೆೞುನ್ದಿರಾಯ್ ॥
ಶೆಂಪೊರ್ಕೞಲಡಿಚ್ಚೆಲ್ವಾಬಲದೇವಾ |
ವುಂಬಿಯುನೀಯುಮುಱಙ್ಗೇಲೋರೆಂಪಾವಾಯ್ ॥ ... ॥೧೭॥

ಪ್ರತಿಪದಾರ್ಥ.

ಅಂಬರಮೇ—ವಸ್ತ್ರಗಳೂ
ತಣ್ಣೀರೇ—ಪಾನೀಯಗಳೂ
ಶೋಱೇ—ಅನ್ನವೂ
ಅಱಂಶೆಯ್ಯುಂ—ಇವುಗಳನ್ನು ಧರ್ಮಾರ್ಥವಾಗಿ ಕೊಡುವ
ಎಂಬೆರುಮಾನ್—ನಮಗಳಿಗೆ ಸ್ವಾಮಿಯಾದ
ನನ್ದಗೋಪಾಲಾ—ಶ್ರೀನಂದಗೋಪನೇ
ಎೞುನ್ದಿರಾಯ್—ಎಚ್ಚರಗೊಳ್ಳಬೇಕು
ಕೊಂಬನಾರ್ಕ್ಕೆಲ್ಲಾಂ—ಸ್ತ್ರೀಯರುಗಳಿಗೆಲ್ಲಾ
ಕೊೞುನ್ದೇ—ಶ್ರೇಷ್ಠಳೇ
ಕುಲವಿಳಕ್ಕೇ—ಗೋಪಾಲಕರ ಕುಲಕ್ಕೆ ದೀಪ ಪ್ರಾಯಳೇ
ಎಂಬೆರುಮಾಟ್ಟಿ—ನಮ್ಮಗೆ ! ಸ್ವಾಮಿನಿಯಾದ
ಯಶೋದಾಯ್—ಯಶೋದಾದೇವಿಯೇ
ಅಱಿವುಱಾಯ್—ಎಚ್ಚರಗೊಳು
ಅಂಬರಂಊಡಱುತ್ತು—ಆಕಾಶವನ್ನೆಲ್ಲಾ ಭೇದಿಸಿ
ಓಙ್ಗಿ ಉಲಕಳನ್ದ—ಬೆಳೆದು ತ್ರಿಲೋಕವನ್ನು ಅಳೆದ
ಉಂಬರ್ಕೋಮಾನೇ—ದೇವಾದಿದೇವನೇ
ಉಱಙ್ಗಾದು—ನಿದ್ರೆಮಾಡದೆ
ಎೞುನ್ದಿರಾಯ್—ಎಚ್ಚರಗೊಳ್ಳಬೇಕು
ಶೆಂಪೊರ್ಕೞಲಡಿ—ಹೊಂಬಣ್ಣದ ಸುಂದರವಾದ ಅನ್ದುಗೆ (ಮಂಜೀರ) ವುಳ್ಳ
ಶೆಲ್ವಾಬಲದೇವಾ—ಶ್ರೀಮನ್ತನಾದ ಬಲದೇವನೇ
ಉಂಬಿಯುಂ ನೀಯುಂ—ನೀನೂ ನಿನ್ನ ತಮ್ಮನೂ
ಉಱಙ್ಗೇಲ್—ನಿದ್ರೆಮಾಡದೆ ಏಳಬೇಕುಂ (ಹಾಗೆ ಮಾಡಿದರೆ)
ಓರ್—ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆಱವೇಱುವುದು.

## ತಾತ್ಪರ್ಯ.

ವಸ್ತ್ರಗಳೂ, ಪಾನೀಯಗಳೂ, ಅನ್ನಾದಿಗಳೂ, ಇವುಗಳನ್ನು ದೀನಾನಾಥರಿಗೆ ಧರ್ಮಾರ್ಥವಾಗಿ ಕೊಡುವಂಥಾ ಸ್ವಾಮಿಯಾದ ಶ್ರೀನನ್ದಗೋಪನೇ, ಎಚ್ಚರಗೊಳ್ಳಬೇಕು. ಸ್ತ್ರೀಯರುಗಳಲ್ಲೆಲ್ಲಾ ಶ್ರೇಷ್ಠಳೇ, ಗೋಪಾಲಕರ ಕುಲಕ್ಕೆ ದೀಪ ಪ್ರಾಯಳೇ, ಮತ್ತು ನಮಗೆ ಸ್ವಾಮಿನಿಯಾದ ಯಶೋದಾದೇವಿಯೇ, ಎಚ್ಚರಗೊಳ್ಳು. ಆಕಾಶವನ್ನೆಲ್ಲಾ ಭೇದಿಸಿ ಏಕಾಕಾರವಾಗಿ ಬೆಳೆದು ತ್ರಿಲೋಕವನ್ನೆಲ್ಲಾ ತ್ರಿವಿಕ್ರಮಾವತಾರದಲ್ಲಿ ಅಳೆದ ದೇವಾದಿದೇವನಾದ ಶ್ರೀಕೃಷ್ಣಸ್ವಾಮಿಯೇ, ನಿದ್ರೆಮಾಡದೆ ಪ್ರಬುದ್ಧನಾಗಬೇಕು. ಹೊಂಬಣ್ಣದ ಸುಂದರವಾದ ಮಂಜೀರವುಳ್ಳ ಶ್ರೀಮನ್ತನಾದ ಬಲದೇವನೇ, ನೀನೂ ನಿನ್ನ ತಮ್ಮನೂ ನಿದ್ರೆಮಾಡದೆ ಏಳಬೇಕು. ಹಾಗೆ ಮಾಡಿದರೆ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆಱವೇಱುವುದು

ಸ್ವಾಪದೇಶಾರ್ಥ—ರಹಸ್ಯಾರ್ಥ.

ಸರ್ವೇಶ್ವರನ ಕೃಪಾವಲೋಕನವನ್ನೂ, ತದ್ವರ್ಧಕವಾದ ಭೋಕ್ತೃತ್ವ ಬುದ್ಧಿ ನಿವೃತ್ತಿಯನ್ನೂ, ಅದಕ್ಕೆ ಹೇತುವಾದ ಕೈಂಕರ್ಯವೃತ್ತಿಯನ್ನೂ ಶಿಷ್ಯರಾದ ನಮಗೆ ಸ್ವಯಂ ಪುರುಷಾರ್ಥವಾಗಿ ಕೃಪೆಮಾಡುವಂಥವರಾಗಿಯೂ ಇರುವ ಆಚಾರ್ಯರೇ, ನೀವು ಪ್ರಬುದ್ಧರಾಗಬೇಕು. ಸಂಸಾರಿಗಳ ಅಭಿಮಾನಕ್ಕೆ ಅನುರೂಪವಾಗಿ ಶ್ರಿಯಃಪತಿಯು ಏರ್ಪಡಿಸಿರುವ ತಾರಕಾದಿ ಮಂತ್ರಗಳೆಲ್ಲಾ ಶ್ರೇಷ್ಠವಾಗಿಯೂ, ಪ್ರಪನ್ನಜನಗೋಷ್ಠಿಗೆ ದೀಪಪ್ರಾಯವಾಗಿಯೂ, ನಮಗಳಿಗೆಲ್ಲಾ ನಿರುಪಾಧಿಕಪುರುಷಕಾರರೂಪವಾಗಿ ಸಕಲ ಪುರುಷಾರ್ಥಂಗಳನ್ನು ಕೊಡುವುದಾಗಿಯೂ ಇರುವ ತಿರುಮಂತ್ರವೇ! ನಿನ್ನ ಅತಿಶಯವಾದ ಅರ್ಥವು ನಮ್ಮ ಅಲ್ಪಬುದ್ಧಿಗೆ ಗೋಚರವಾಗುವಂತೆ ಕೃಪೆಮಾಡಬೇಕು. ನಿರೀಶ್ವರವಾದಿಗಳು ನಿರ್ಮೂಲವಾಗಿ ನಾಶವಾಗುವಂತೆ ತನ್ನ ಸ್ವರೂಪವು ಏಕಾಕಾರದಿಂದ ಅಭಿವೃದ್ಧವಾಗಲು, ಈ ಲೀಲಾವಿಭೂತಿಯೆಲ್ಲವನ್ನೂ ಅಳೆದ ನಿತ್ಯಸೂರಿನಿರ್ವಾಹಕನಾದ ಪುರುಷೋತ್ತಮನೇ, ಅನಾದ್ಯವಿದ್ಯಾ ತಮಸ್ಸಿನಲ್ಲಿ ಮುಳುಗಿ ಸಂಕಟಪಡುವ ನಮ್ಮಗಳ ಮೋಹವನ್ನು ಹೋಗಲಾಡಿಸಿ ಯೋಗನಿದ್ರೆಯಿಂದ ಪ್ರಬುದ್ಧನಾಗು. ಸ್ವಶೇಷತ್ವದಲ್ಲಿ ಭಗವಚ್ಛೇಷತ್ವವು ಅಂತರ್ಗತವಾಗುವಹಾಗೆ ಬಿಜಯಮಾಡಿರುವ ಬಲದೇವನೇ, ನಿನಗೆ ಭವ್ಯನಾದ ಶ್ರೀಕೃಷ್ಣನೂ ಅವನಿಗೆ ಭವ್ಯನಾದ ನೀನೂ—ನೀವಿಬ್ಬರೂ ನಿದ್ರೆಯಿಂದ ಪ್ರಬುದ್ಧರಾಗಿ ನಮ್ಮಮೇಲೆ ಕೃಪೆಮಾಡಿ ಕಟಾಕ್ಷಿಸಿದರೆ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

---

17. "O revered preceptor, who hast secured us, thy faithful disciples, (1) the Kind and Gracious Look of the Almighty, (2) the removal of all vanity engendered in our minds consequent upon the bestowal of such a Grace, (3) and the honourable service we are able to offer to the Supreme Being—these three as our inestimable aims, and who hast all along taken up the position of our *Saviour*, be pleased to wake up." "O Thou, sacred *Tirumantra*, (addressing the eight-syllabled *mantra* styled *Astâkshara*) most beloved unto our preceptor as a wife, that hast fitly become the chief of all the mantrâs that have been held sacred and most suitable according to the special needs and aspirations of human beings of different shades of intellectual progress, and the guiding light to all faithful devotees of unflinching loyalty to the Great Being! Thou art the giver of all gifts and the fulfiller of all aspirations! we humbly approach thee, to be blessed with that true and esoteric *light* from thee which may shew us, poor minds, the way leading unto righteousness." O Thou, Great Being, (turning towards the Almighty Lord) That hast measured all the worlds with Thy Feet, so that Thy Glory and Presence may be felt all over, so much so that even men of *sceptical* minds may change their materialistic views and bend their minds toward Thee for Grace and Salvation! O Director of eternal beings, be graciously pleased to wake up from Thy conscious sleep, and to bestow on us enough of light and grace to remove the veil of ignorance and illusion that had surrounded and enveloped our nature from time immemorial." O Baladêva, the incarnation of the thousand-hooded serpent, *Ananta*, who art subservient to Srikrishna, (Who in His turn obeys thy commands,) if both should graciously condescend to direct your attention towards us, your devotees, and bestow on us your light and grace, we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences.

ಉನ್ದುಮದಕಳಿಱ್ಱನೋಡಾದತೋಳ್ವಲಿಯ |
ನನ್ದಗೋಪಾಲನ್ಮರುಮಕಳೇನಪ್ಪಿನ್ನಾಯ್ ||
ಕನ್ದಙ್ಗಮೞುಙ್ಗುೞಲೀಕಡೈತ್ತಿಱವಾಯ್ |
ವನ್ದೆಙ್ಗುಙ್ಗೋೞಿಯೞೈತ್ತನಕಾಣ್ಮಾದವಿ ||
ಪ್ಪನ್ದನ್ಮೇಲ್ಪಲ್ಕಾಲ್ಕುಯಿಲಿನಙ್ಗಳ್ಕೂವಿನಕಾಣ್ ||
ಪನ್ದಾರ್ವಿರಲಿಯುನ್ಮೈತ್ತುನನ್ಪೇರ್ಪಾಡ |
ಚ್ಚೆನ್ದಾಮರೈಕ್ಕೈಯಾಲ್ಶೀರಾರ್ವಳೈಯೊಲಿಪ್ಪ |
ವನ್ದುತಿಱವಾಯ್ಮಕಿೞ್ನ್ದೇಲೋರೆಂಪಾವಾಯ್ ... ||೧೮||

ಪ್ರತಿಪದಾರ್ಥ-

ಉನ್ದುಮದ–ಸ್ರವಿಸುವ ಮದಜಲವುಳ್ಳ
ಕಳಿಱ್ಱಿನ್–ಗಜರಾಜನಂತೆ ಬಲಿಷ್ಠನಾದಂಥ
ಓಡಾದ ತೋಳ್ವಲಿಯನ್–ಶತ್ರುಗಳನ್ನು ನೋಡಿ ಹಿಂತೆಗೆಯದೆ ಎದುರಿಸುವ ಭುಜಬಲವುಳ್ಳಂಥಾ
ನನ್ದಗೋಪಾಲನ್–ಶ್ರೀನನ್ದಗೋಪನ
ಮರುಮಕಳೇ ನಪ್ಪಿನ್ನಾಯ್–ಸೊಸೆಯಾದ ನೀಳಾದೇವಿಯೇ
ಕನ್ದಂಕಮೞುಂ–ಪರಿಮಳವನ್ನು ಬೀಸುವ
ಕುೞಲೀ–ಕುಂತಲಗಳುಳ್ಳವಳೇ
ಕಡೈತ್ತಿಱವಾಯ್–ಬಾಗಿಲನ್ನು ತೆಗೆ
ವನ್ದೆಙ್ಗುಂ–ನಾಲ್ಕು ಕಡೆಯಿಂದಲೂ ಸುತ್ತಿಕ್ಕೊಂಡು
ಕೋೞಿ ಅೞೈತ್ತನಕಾಣ್–ಕೋೞಿಗಳೂ ಕೂಗುತ್ತವೆ
ಮಾದವಿ–ಮಾಧವೀಲತೆಯ
ಪನ್ದಲ್ಮೇಲ್–ಚಪ್ಪರದಮೇಲೆ
ಪಲ್ಕಾಲ್–ಅನೇಕಾವರ್ತಿ
ಕುಯಿಲ್ ಇನಙ್ಗಳ್–ಕೋಗಿಲೆಗಳ ಸಮೂಹಂಗಳು
ಕೂವಿನಕಾಣ್–ಕೂಗುತ್ತವೆ
ಪನ್ದಾರ್ವಿರಲಿ–ಕಂತುಕದಿಂದ ಶೋಭಿಸುವ ಬೆರಳುಳ್ಳವಳೇ
ಉನ್ಮೈತ್ತುನನ್–ನಿನ್ನ ಕಾಂತನ (ಶ್ರೀಕೃಷ್ಣನ)
ಪೇರ್ಪಾಡ–ದಿವ್ಯನಾಮಂಗಳನ್ನು ಸಂಕೀರ್ತನೆಮಾಡಲು
ಶೆನ್ದಾಮರೈಕ್ಕೈಯಾಲ್–ಕೆಂದಾವರೆಯಂತೆ ಮನೋಹರವಾದ ಹಸ್ತದಿಂದ
ಶೀರಾರ್ವಳೈ–ಸುಂದರ ತೋಳ್ಬಳೆಗಳು
ಒಲಿಪ್ಪ–ಶಬ್ದವಾಗುವಹಾಗೆ
ವನ್ದುತಿಱವಾಯ್–ಬನ್ದು ಬಾಗಿಲನ್ನು ತೆಗೆ
ಮಕಿೞ್ನ್ದು–ಸಂತೋಷಿಸಿ
ಏಲ್, ಓರ್–ತಕ್ಕ, ಅದ್ವಿತೀಯವಾದ
ಎಂಪಾವೈ–ನಮ್ಮ ಈ ವ್ರತವು
ಆಯ್–ಶುಭವಾಗಿ ನೆರವೇರುವುದು.

ತಾತ್ಪರ್ಯ.

ಸ್ರವಿಸುವ ಮದಜಲವುಳ್ಳ ಗಜರಾಜನಂತೆ ಬಲಿಷ್ಠನಾದಂಥವನಾಗಿಯೂ, ಶತ್ರುಗಳನ್ನು ಕಂಡು ಹಿಂತೆಗೆಯದೆ ಎದುರಿಸತಕ್ಕ ಭುಜಬಲವುಳ್ಳಂಥವನಾಗಿಯೂ ಇರುವ ಶ್ರೀನನ್ದಗೋಪನ ಸೊಸೆಯಾದ ನೀಳಾದೇವಿಯೇ, ಸುಗಂಧಪರಿಮಳಪ್ರವಾಹವನ್ನು ಬೀಸುವ ಕುಂತಲಗಳುಳ್ಳವಳೇ, ನಾಲ್ಕುಕಡೆಯಲ್ಲಿಯೂ ಕೋೞಿಗಳು ಕೂಗುತ್ತವೆ; ಮಾಧವೀಲತೆಯ ಚಪ್ಪರದಮೇಲೆ ಅನೇಕಾವೃತ್ತಿ ಕೋಗಿಲೆಗಳ ಸಮೂಹಂಗಳು ಕೂಗುತ್ತವೆ; ಕಂತುಕದಿಂದ ಶೋಭಿಸುವ ಬೆರಳುಳ್ಳವಳೇ, ನಿನ್ನ ಕಾಂತನಾದ ಶ್ರೀಕೃಷ್ಣಸ್ವಾಮಿಯ ದಿವ್ಯನಾಮಂಗಳನ್ನು ನಾವು ಸಂಕೀರ್ತನೆಮಾಡಲು, ನೀನು ಕೆಂದಾವರೆಯಂತೆ ಮನೋಹರವಾದ ಹಸ್ತದಿಂದ ಸುಂದರವಾದ ತೋಳ್ಬಳೆಗಳು ಶಬ್ದವಾಗುವಹಾಗೆ ನಡೆದು ಸಂತುಷ್ಟಚಿತ್ತಳಾಗಿ ಬಂದು ಬಾಗಿಲನ್ನು ತೆಗೆ. ಹಾಗೆ ನೀನು ಕೃಪೆಮಾಡಿದಲ್ಲಿ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಉನ್ಮಸ್ತಕವಾದ ಅಹಂಕಾರವನ್ನು ಜಯಿಸುವಂಥಾ ಜ್ಞಾನಬಲವುಳ್ಳ ಆಚಾರ್ಯನಿಗೆ ಸೊಸೆಯು ಪ್ರಾಯಳಾದ ನೀಳಾದೇವಿಯೇ, ಸರ್ವೇಶ್ವರನನ್ನು ಆಶ್ರಿತ ರಕ್ಷಣದಲ್ಲಿ ಉದ್ಯೋಗಿಸುವಂತೆ ಪ್ರೇರಿಸುವ ಲಕ್ಷ್ಮಿಯೇ, ನೀವಿಬ್ಬರ ಸನ್ನಿಧಿಯನ್ನು ನಾವು ಸೇವಿಸುವಹಾಗೆ ನಮ್ಮ ಅಜ್ಞಾನವನ್ನು ಹೋಗಲಾಡಿಸು. ಈಗ ಸತ್ವೋತ್ತರಕಾಲವಾದುದರಿಂದ ಭಾಗವತರು ಭಗವತ್ಕೈಂಕರ್ಯಕ್ಕಾಗಿ ಒಬ್ಬರನ್ನೊಬ್ಬರು ಪ್ರಬೋಧಮಾಡುವರು. ವೇದಾಂತ ಗ್ರಂಥಗಳಲ್ಲಿ ಉತ್ಕೃಷ್ಟವಾದ ಅರ್ಥವಿಶೇಷಂಗಳನ್ನು ಅನುಭವಿಸುವ ಪರಮಭಾಗವತರು ಸತ್ವವು ತಲೆಯೆತ್ತಿದ ಕಾಲದಲ್ಲಿಯೂ ಅಲ್ಲಿ ಪ್ರತಿಪಾದ್ಯನಾದ ನಿನ್ನನ್ನು ಕಾಣದೆ ಅನೇಕಾವರ್ತಿ ಮೊರೆಯಿಡುವರು. ಒಂದು ಹಸ್ತದಲ್ಲಿ ಚೇತನವರ್ಗವನ್ನೂ ಮತ್ತೊಂದು ಹಸ್ತದಲ್ಲಿ ಸರ್ವೇಶ್ವರನನ್ನೂ ಆಲಿಂಗಿಸಿಕೊಂಡಿರುವ ಲಕ್ಷ್ಮಿಯೇ! ನಿರತಿಶಯಪ್ರೇಮಾತ್ಮಕವಾದ ಜ್ಞಾನದಿಂದ ಭಗವತ್ಸಂಬಂಧಸೂಚಕವಾದ ಅನಂತರಹಸ್ಯಾರ್ಥಂಗಳು ಬೆಳಗುವಂತೆ ಸ್ವರೂಪೋಪಾಯಪುರುಷಾರ್ಥವಿರೋಧಿವಿಷಯಕವಾದ ಆಯಾ ಅಜ್ಞಾನವನ್ನು ನಿವಾರಣೆ ಮಾಡಿ ಕೃಪೆಮಾಡಬೇಕು. ಈ ನಮ್ಮ ಕೋರಿಕೆಯಂತೆ ನೀನು ಸಂತೋಷಿಸಿ ಅಪ್ಪಣೆ ಮಾಡಿದರೆ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯ ರೂಪವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.

---

18. "O Niladêvi, Consort of Krishna, daughter-in-law, as it were, of our great preceptor capable of overcoming, with the strength of his supreme knowledge, the stupendous Ahankâra (Egoity)! O Mother! that inducest thy Spouse to engage Himself in protection by affording shelter to His devotees, be pleased to remove our ignorance so that we may be worthy of doing homage before the presence of Thyself and thy Lord. The present hour being the auspicious occasion fit for worship, the Bhâgavatâs (pious devotees) are calling each other to muster strong for the purpose of offering their humble devotional services to the Lord; and the saints that are capable of realising the highest teachings found on the high pedestal of Vedânta, are invoking thee many a time, not finding thee even after the principle of *satva* has spread itself far and wide. O Goddess! holding in one hand the totality of the souls, and in the other thy very Lord Nârâyanâ, be graciously pleased to remove our ignorance coming in the way of our understanding our real nature, the true means of salvation, and the final achievement of our end; so that the occult sacred truths, which *refer to the relationship between our souls and the Supreme Being*, and which can only be known and realised by a superior and intense *love and wisdom*, may shine forth on all sides. If thou shouldst condescend to remove our ignorance in accordance with our expectations, we shall be in a fair way to bring the special vow to a successful fruition—the vow consisting in holding communion with the Lord and in the uninterrupted enjoyment of His Glory, Mercy, Goodness, and other Excellences."

ಕುತ್ತುವಿಳಕ್ಕೆರಿಯಕ್ಕೋಟ್ಟುಕ್ಕಾಲ್ಕಟ್ಟಿಲ್ಮೇಲ್ |
ಮೆತ್ತೆನ್ರಪಞ್ಚಶಯನತ್ತಿನ್ಮೇಲೇರಿ ‖
ಕೊತ್ತಲರ್ಪೂಙ್ಕುಳಲ್ನಪ್ಪಿನ್ನೈಕೊಙ್ಗೈಮೇಲ್ |
ವೈತ್ತುಕ್ಕಿಡನ್ದಮಲರ್ಮಾರ್ವಾ ವಾಯ್ತಿರವಾಯ್ ‖
ಮೈತ್ತಡಙ್ಗಣ್ಣಿನಾಯ್ನೀಯುನ್ಮಣಾಳನೈ |
ಯೆತ್ತನೈಪೋದುನ್ದುಯಿಲೆಳವೊಟ್ಟಾಯ್ಕಾಣ್ ‖
ಯೆತ್ತನೈಯೇಲುಂಪಿರಿವಾಱ್ಱಕಿಲ್ಲಾಯಾಲ್ |
ತತ್ತುವಮನ್ರುತಕವೇಲೋರೆಂಪಾವಾಯ್ ‖ ... ‖೧೯‖

ಪ್ರತಿಪದಾರ್ಥ.

ಕುತ್ತುವಿಳಕ್ಕು—ದೀಪಸ್ತಂಭದ ಬೆಳಕು
ಎರಿಯ—ಪ್ರಕಾಶಿಸಲು
ಕೋಟ್ಟುಕ್ಕಾಲ್—ಗಜದಂತದ ಕಾಲುಗಳುಳ್ಳ
ಕಟ್ಟಿಲ್ಮೇಲ್—ಪರ್ಯಙ್ಕದಲ್ಲಿ
ಮೆತ್ತೆನ್ರ—ಮೃದುವಾದ
ಪಞ್ಚಶಯನತ್ತಿನ್ಮೇಲ್—ಐದುಬಗೆಯ ಶಯನದಮೇಲೆ
ಏರಿ—ಆರೂಢನಾಗಿ
ಕೊತ್ತು ಅಲರ್—ಗೊಂಚಲುಗೊಂಚಲಾಗಿ ಅರಳಿರುವ
ಪೂಙ್ಕುಳಲ್—ಪುಷ್ಪಂಗಳಿಂದ ಕೂಡಿದ ಕುಂತಲಗಳುಳ್ಳ
ನಪ್ಪಿನ್ನೈಕೊಙ್ಗೈ—ನೀಳಾದೇವಿಯ ಸ್ತನಗಳನ್ನು
ಮೇಲ್ವೈತ್ತು—ತನ್ನಮೇಲೆ ಇಟ್ಟುಕೊಂಡು
ಕಿಡನ್ದ—ಶಯನಮಾಡುವ
ಮಲರ್ಮಾರ್ವಾ—ವಿಶಾಲ ವಕ್ಷಸ್ಥಳವುಳ್ಳವನೇ
ವಾಯ್ತಿರವಾಯ್—ಒಂದು ಮಾತನ್ನು ಬಾಯಿಬಿಟ್ಟು ಅಪ್ಪಣೆಕೊಡಿಸು

ಮೈತ್ತಡಙ್ಗಣ್ಣಿನಾಯ್—ಅಂಜನಾಲಂಕೃತವಾದ ವಿಶಾಲ ನೇತ್ರಳೇ (ನೀಳಾದೇವಿಯೇ)
ನೀ ಉನ್ಮಣಾಳನೈ—ನಿನ್ನ ಸ್ವಾಮಿಯಾದ ಶ್ರೀಕೃಷ್ಣನನ್ನು
ಎತ್ತನೈಪೋದುಂ—ಸ್ವಲ್ಪ ಕಾಲವಾದರೂ
ತುಯಿಲೆಳವೊಟ್ಟಾಯ್ಕಾಣ್—ಪ್ರಬುದ್ಧನಾಗಿ ಹಾಸುಗೆಯಿಂದ ಎದ್ದು ಬರುವಹಾಗೆ ಬಿಡುವುದಿಲ್ಲವಲ್ಲ
ಎತ್ತನೈಯೇಲುಂ—ಸ್ವಲ್ಪವಾದರೂ
ಪಿರಿವು ಆಱ್ಱಕಿಲ್ಲಾಯಾಲ್—ವಿಶ್ಲೇಷವನ್ನು ಸಹಿಸಲಾರದವಳೇ
ತತ್ತುವಂ ಅನ್ರು—ನಿನ್ನ ಸ್ವರೂಪಕ್ಕೆ ಯೋಗ್ಯವಲ್ಲ
ತಕವು (ಅನ್ರು)—ನಿನ್ನ ಸ್ವಭಾವಕ್ಕೂ ತಕ್ಕುದಲ್ಲ.
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು

ತಾತ್ಪರ್ಯ.

ದೀಪಸ್ತಂಭದ ಪ್ರಕಾಶವು ನಾಲ್ಕು ಕಡೆಯಲ್ಲಿಯೂ ಬೆಳಗುತ್ತಿರಲು, ಗಜದಂತದ ಕಾಲುಗಳುಳ್ಳ ಪರ್ಯಙ್ಕದಲ್ಲಿ ಮೃದುವಾದ ಐದುವಿಧದ ಶಯನದಮೇಲೆ ಆರೂಢನಾಗಿ, ಗೊಂಚಲುಗೊಂಚಲಾಗಿ ಅರಳಿರುವ ಪುಷ್ಪಗಳಿಂದ ಕೂಡಿದ ಕುಂತಲಗಳುಳ್ಳ ನೀಳಾದೇವಿಯ ಸ್ತನಗಳನ್ನು ಮೇಲೆ ಇಟ್ಟುಕೊಂಡು ಶಯನಮಾಡುವ ವಿಶಾಲವಕ್ಷಸ್ಥಳನೇ, ನಿನ್ನ ವದನಾರವಿಂದವನ್ನು ತೆರೆದು ಒಂದು ಮಾತನ್ನು ಅಪ್ಪಣೆಕೊಡಿಸು. ಅಂಜನಾಲಂಕೃತವಿಶಾಲನೇತ್ರೆಯಾದ ನೀಳಾದೇವಿಯೇ, ಸ್ವಾಮಿಯಾದ ಶ್ರೀಕೃಷ್ಣನನ್ನು ಸ್ವಲ್ಪಕಾಲವಾದರೂ ಪ್ರಬುದ್ಧನಾಗಿ ಹಾಸುಗೆಯಿಂದ ಎದ್ದು ಹೊರಗೆ ಬರುವಹಾಗೆ ನೀನು ಬಿಡುವುದಿಲ್ಲವಲ್ಲಾ! ಸ್ವಲ್ಪವಾದರೂ ಶ್ರೀಕೃಷ್ಣವಿಶ್ಲೇಷವನ್ನು ಸಹಿಸಲಾರದವಳೇ, ನಮಗೆ ಅವನನ್ನು ನೋಡಲು ಸ್ವಲ್ಪವಾದರೂ ಅವಕಾಶಕೊಡದಂತೆ ನೀನು ಹೀಗೆ ಮಾಡುವುದು ನಿನ್ನ ಸ್ವರೂಪಕ್ಕೆ ಅನುರೂಪವೂ ಅಲ್ಲ, ನಿನ್ನ ಸ್ವಭಾವಕ್ಕೆ ತಕ್ಕುದೂ ಅಲ್ಲ. ಆದಕಾರಣ ನಾವು ಸ್ವಾಮಿಯನ್ನು ಸೇವಿಸುವಂತೆ ನೀನು ಅವಕಾಶಕೊಟ್ಟರೆ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

"ಸಮ್ಯಕ್ ಜ್ಞಾನವು ಪ್ರಜ್ವಲಿಸಲು ಅಹಂಕಾರಕಾರ್ಯವಾಗಿರುವ ಚತುರ್ವಿಧ ಕರ್ತೃತ್ವ:—
(೧) ಶೇಷತ್ವೇ ಕರ್ತೃತ್ವಂ—ಚೇತನನಾದ ತಾನು ಈಶ್ವರನಿಗೆ ಶೇಷಭೂತನೆಂಬ ಅಭಿಮಾನ.

(೨) ಜ್ಞಾತೃತ್ವೇಕರ್ತೃತ್ವಂ—ಉಪಾಸ್ಯನಾದ ಈಶ್ವರನನ್ನು ತಾನು ತಿಳಿಯಬಲ್ಲನೆಂಬ ಅಭಿಮಾನ. (೩) ಕರ್ತೃತ್ವೇಕರ್ತೃತ್ವಂ—ಈಶ್ವರನಿಯಾಮ್ಯನಾಗಿ ತಾನು ಮಾಡುವ ಕಾರ್ಯಗಳಲ್ಲಿ ಅಭಿಮಾನ. (೪) ಭೋಗ್ಯತ್ವೇಕರ್ತೃತ್ವಮ್—ಯಜಮಾನನಾದ ಈಶ್ವರನಿಗೆ ತಾನು ಭೋಗ್ಯವಾಗಿದೇನೆಂಬ ಅಭಿಮಾನಗಳೆಂಬ ನಾಲ್ಕು ಕಟ್ಟುಗಳಿಂದ ಚೆನ್ನಾಗಿ ಕಟ್ಟಲ್ಪಟ್ಟದ್ದಾಗಿರುವ ಈ ಲೀಲಾವಿಭೂತಿಯೆಂಬ ಪರ್ಯಂಕದಮೇಲೆ ಹಿಂದೆ ಹೇಳಲ್ಪಟ್ಟ ಕರ್ತೃತ್ವರಾಹಿತ್ಯದಿಂದ ಪಕ್ವವಾಗಿ ಬಹು ಮೃದುವಾದ ಅರ್ಥಪಂಚಕಜ್ಞಾನವುಳ್ಳ ಮುಮುಕ್ಷುಗಳ ಹೃದಯವೆಂಬ ಹಾಸುಗೆಯಮೇಲೆ ಶಯನಿಸಿಕೊಂಡಿರುವ ಸ್ವಾಮಿಯೇ! ನಿನ್ನ ವದನಾರವಿಂದವನ್ನು ತೆರೆದು ಒಂದು ಮಾತನ್ನಾದರೂ ಅಪ್ಪಣೆಕೊಡಬೇಕು"—ಹೀಗೆಂದು ಭಾಗವತರಾದ ಚೇತನರು ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದರು. ಆ ಸ್ವಾಮಿಯು ಯಾವ ಉತ್ತರವನ್ನೂ ಕೊಡದಿರುವುದನ್ನು ಕಂಡು, ಸ್ವಾಮಿಗೆ ಅತ್ಯಂತ ಪ್ರೇಮಪಾತ್ರಳಾದ ಲಕ್ಷ್ಮೀದೇವಿಯನ್ನು ಸಮೀಪಿಸಿ ಇವರು—ಎಲೈ ತಾಯೇ. ಶುದ್ಧ ಸತ್ವದಿಂದ ವಿಶೃಂಖಲವಾಗಿ ಬೆಳಗುವ ಸ್ವರೂಪ ಯಾಥಾತ್ಮ್ಯ ಜ್ಞಾನವುಳ್ಳ ಲಕ್ಷ್ಮೀದೇವಿಯೇ, ನೀನು ಸ್ವಲ್ಪವಾದರೂ ಸ್ವಾಮಿಯ ವಿಶ್ಲೇಷವನ್ನು ಸಹಿಸಲಾರೆಯಲ್ಲಾ! ಅವನನ್ನು ಸ್ವಲ್ಪ ಹೊತ್ತಾದರೂ ಬಿಟ್ಟಿರುವುದು ನಿನ್ನ ಸ್ವರೂಪವಲ್ಲವಾದುದರಿಂದ ನೀನು ಏನುಮಾಡೀಯೇ! ನಿನ್ನ ಪರವಾಗಿ ನಾವು ಪರ್ಯಾಲೋಚಿಸಿದರೆ, ನಿನ್ನಮೇಲೆ ಯಾವ ತಪ್ಪೂ ಇಲ್ಲ. ನಮ್ಮಂತಹ ಚೇತನರ ವಿಷಯವನ್ನು ಕುರಿತು ಯೋಚಿಸಿದ್ದೇಯಾದರೆ, ನಮ್ಮಗಳಿಗೆಲ್ಲಾ ಪುರುಷಕಾರಭೂತೆಯಾದ ನೀನು ಸ್ವಾಮಿಯನ್ನು ನಮ್ಮೊಡನೆ ಸೇರದಂತೆ ಮಾಡುವುದು ನಿನಗೆ ಯೋಗ್ಯವಲ್ಲ; ಆದಕಾರಣ ನೀನು ದಯವಿಟ್ಟು ನಮ್ಮೊಡನೆ ಆ ಸರ್ವಸ್ವಾಮ್ಯಪರನು ಸ್ವಲ್ಪಹೊತ್ತು ಸೇರುವಂತೆ ಉಪಕಾರಮಾಡಿದರೆ, ನಮ್ಮ ಭಗವತ್ಕೈಂಕರ್ಯರೂಪವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು ಎಂದು ವಿಜ್ಞಾಪಿಸಿಕೊಂಡರು.

---

19. "O Heavenly Father! taking rest, while thy Omniscience shines supreme, on the soft bedding of the hearts of Thy devotees, stuffed with the soft down of the knowledge of the five Truths (*Arthapanchaka Gnâna*), and spread upon the couch of the mysterious and *wonderful mundane world* (*Leelavibhuti*), supported by four legs i. e. four kinds of *agency* (due to the influence of *Ahankâra*) consisting of (1) the feeling of agency in the belief of dependance, (2) the feeling of agency in entertaining such knowledge, (3) the feeling of agency in the idea of the soul being agent, (4) the feeling of agency in the soul's uninterrupted enjoyment of the Lord; and which couch is well-jointed by four aims of life—duty, wealth, desire and liberation. O Lord! be graciously pleased to speak a kind word to us." Thus fervently prayed the devotees of the Lord. In spite of such a prayer, these Bhágavatás were not favoured with any reply. On seeing this, they thought, within themselves thus—"We have made a mistake in not proceeding unto the Lord through a proper *mediator*." They accordingly resolved on addressing Lakshmi, His Consort, their proper mediator, and said, "O Mother of all, the possessor of true and infinite knowledge and wisdom, Thou dost not bear even a slight separation from thy Spouse! yes; it is thy nature, and thou can'st not help it. While we see that Thou art not to blame in such a procedure, so far as thy interests are concerned, it is rather unfair and improper that thou, as our chief leader and mediator, shouldst not give us some opportunity to meet and have a view of our Lord; hence, if thou shouldst condescend to so arrange as to take us to His Presence and favour us with His Interview, we shall be in a fair way to bring the special vow to a successful fruition—the vow consisting in holding communion with the Lord and in the uninterrupted enjoyment of His Glory, Mercy, Goodness, and other Excellences."

ಮುಪ್ಪತ್ತುಮೂವರಮರರ್ಕ್ಕುಮ್ಮುನ್ಸೆನ್ಱು ।
ಕಪ್ಪನ್ತವಿರ್ಕ್ಕುಂಗಲಿಯೇತುಯಿಲೆೞಾಯ್ ॥
ಶೆಪ್ಪಮುಡೈಯಾಯ್ತ್ತಿಱಲುಡೈಯಾಯ್ಶೆಱ್ಱಾರ್ಕ್ಕು ।
ವೆಪ್ಪಂಕೊಡುಕ್ಕುಂವಿಮಲಾತುಯಿಲೆೞಾಯ್ ॥
ಶೆಪ್ಪನ್ನಮೆನ್ಮುಲೈಚ್ಚೆವ್ವಾಯ್ಚ್ಚಿಱುಮರುಙ್ಗ್ ।
ನಪ್ಪಿನ್ನೈನಙ್ಗಾಯ್ತ್ತಿರುವೇತುಯಿಲೆೞಾ ॥
ಉಕ್ಕಮುನ್ತಟ್ಟೊಳಿಯುನ್ತನ್ದುನ್ಮಣಾಳನೈ ।
ಇಪ್ಪೋದೇಯೆಮ್ಮೈನೀರಾಟ್ಟೇಲೋರೆಂಬಾವಾಯ್ ॥ ... ॥೨೦॥

## ಪ್ರತಿಪದಾರ್ಥ.

ಮುಪ್ಪತ್ತುಮೂವರ್ ಅಮರರ್ಕ್ಕು—ಮುವ್ವತ್ತುಮೂರುಕೋಟಿ ದೇವತೆಗಳಿಗೆ
ಮುನ್ಶೆನ್ಱು—(ಸಂಕಟವು ಪ್ರಾಪ್ತವಾಗುವುದಕ್ಕೆ) ಮುಂಚೆಯೇ ಹೋಗಿ
ಕಪ್ಪಂತವಿರ್ಕ್ಕುಂ—ಅವರ ಭಯ ಕಂಪವನ್ನು ಹೋಗಲಾಡಿಸುವ
ಕಲಿಯೇ—ಸಮರ್ಥನೇ
ತುಯಿಲೆೞಾಯ್—ಹಾಸುಗೆಯಿಂದ ಏಳಬೇಕು
ಶೆಪ್ಪಮುಡೈಯಾಯ್—ನಿಷ್ಪಕ್ಷಪಾತಿಯೇ
ತಿಱಲುಡೈಯಾಯ್—(ದುಷ್ಟನಿಗ್ರಹಮಾಡುವ) ದುರಾಧರ್ಷವಾದ ಶಕ್ತಿ ವಿಶೇಷವುಳ್ಳವನೇ
ಶೆಱ್ಱಾರ್ಕ್ಕು—ಆಶ್ರಿತರ ಶತ್ರುಗಳಿಗೆ
ವೆಪ್ಪಂಕೊಡುಕ್ಕುಂ—ದುಃಖವನ್ನು ಉಂಟುಮಾಡುವ
ವಿಮಲಾ—ನಿರ್ಮಲನೇ
ತುಯಿಲೆೞಾಯ್—ಪ್ರಬೋಧವನ್ನು ಹೊಂದಬೇಕು.
ಶೆಪ್ಪನ್ನಮೆನ್ಮುಲೈ—ಸ್ವರ್ಣ ಕುಂಭಸ್ತನಿಯಾದ
ಶೆವ್ವಾಯ್—ಬಿಂಬೋಷ್ಠೆಯಾದ
ಶಿಱುಮರುಙ್ಗಲ್—ತನುಮಧ್ಯೆಯಾದ
ನಪ್ಪಿನ್ನೈನಙ್ಗಾಯ್—ನೀಳಾದೇವಿಯೇ
ತಿರುವೇ—ಲಕ್ಷ್ಮೀಸದೃಶಳೇ
ತುಯಿಲೆೞಾಯ್—ಪ್ರಬೋಧವನ್ನು ಹೊಂದು
ಉಕ್ಕಮುಂ—ಆಲವಟ್ಟವೂ
ತಟ್ಟೊಳಿಯುಂ—ದರ್ಪಣವೂ
ತನ್ದು—ಇವೆರಡನ್ನೂ ತಂದುಕೊಟ್ಟು
ಉನ್ಮಣಾಳನೈ—ನಿನ್ನ ಸ್ವಾಮಿಯಾದ ಶ್ರೀಕೃಷ್ಣನನ್ನು
ಇಪ್ಪೋದೇಎಮ್ಮೈ—ಈಗಲೇ ನಮ್ಮನ್ನು ಕೂಡ
ನೀರಾಟ್ಟು—ಮಂಗಳಸ್ನಾನ ಮಾಡಿಸಲಾಗಿ
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಶುಭವಾಗಿ ನೆಱವೇಱುವುದು.

## ತಾತ್ಪರ್ಯ.

ನಿನ್ನ ಮುವ್ವತ್ತುಮೂರುಕೋಟಿ ದೇವತೆಗಳಿಗೆ ಸಂಕಟವು ಪ್ರಾಪ್ತವಾಗುವುದಕ್ಕೆ ಮುಂಚೆಯೇ ಹೋಗಿ ಅವರ ಕಷ್ಟವನ್ನು ಹೋಗಲಾಡಿಸುವ ಸಮರ್ಥನೇ, ಹಾಸುಗೆಯಿಂದ ಏಳಬೇಕು ; ನಿಷ್ಪಕ್ಷಪಾತಿಯೇ, ದುಷ್ಟನಿಗ್ರಹಮಾಡುವ ದುರಾಧರ್ಷವಾದ ಶಕ್ತಿವಿಶೇಷವುಳ್ಳವನೇ ; ಆಶ್ರಿತರ ಶತ್ರುಗಳಿಗೆ ದುಃಖವನ್ನು ಉಂಟುಮಾಡುವ ಸ್ವಾಮಿಯೇ, ನಿರ್ಮಲನೇ, ಪ್ರಬೋಧವನ್ನು ಹೊಂದಬೇಕು. ಸ್ವರ್ಣ ಕುಂಭಸ್ತನವಿಶಿಷ್ಟಳಾಗಿಯೂ, ಬಿಂಬೋಷ್ಠೆಯಾಗಿಯೂ ತನುಮಧ್ಯಳಾಗಿಯೂ ಇರುವ ನೀಳಾದೇವಿಯೇ, ಲಕ್ಷ್ಮೀಸದೃಶಳೇ, ಪ್ರಬೋಧವನ್ನು ಹೊಂದು. ಆಲವಟ್ಟವನ್ನೂ ದರ್ಪಣವನ್ನೂ ತಂದುಕೊಟ್ಟು ನಿನ್ನ ಸ್ವಾಮಿಯಾದ ಶ್ರೀಕೃಷ್ಣನನ್ನೂ ನಮ್ಮನ್ನೂ ಈಗಲೇ ನೀನು ಮಂಗಳಸ್ನಾನ ಮಾಡಿಸಿದರೆ, ನಮ್ಮ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆಱವೇಱುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

“ಅಸಂಖ್ಯಾತರಾಗಿಯೂ ಜ್ಞಾನಸಂಕೋಚರಹಿತರಾಗಿಯೂ ಇರುವ ತನ್ನ ಭಕ್ತರಾದ ಚೇತನರಿಗೆ ಪ್ರಕೃತಿಸಂಬಂಧದಿಂದ ಬರಬಹುದಾದ ಜ್ಞಾನಸಂಕೋಚಭೀತಿಯನ್ನು ಮೊದಲೇ ನಿವಾರಣಮಾಡುವ ಸಾಮರ್ಥ್ಯವುಳ್ಳ ಸರ್ವೇಶ್ವರನೇ, ನೀನು ಪ್ರಬುದ್ಧನಾಗಿ ನಮಗೆ ದರ್ಶನವನ್ನು ಕೊಡಬೇಕು. ನಿಷ್ಪಕ್ಷಪಾತಿಯಾದ ಸ್ವಾಮಿಯೇ, ಅನಾಶ್ರಿತರಿಗೆ ಸುಲಭನಾಗದವನೇ, ತನ್ನ ಭಕ್ತರಿಗೆ ಭಯೋತ್ಪಾದಕಂಗಳಾದ ವಿರೋಧಿಗಳನ್ನು ನಿರಸನ ಮಾಡುವ ಶುದ್ಧಸ್ವರೂಪನೇ, ಪ್ರಬುದ್ಧನಾಗಿ ನಮ್ಮನ್ನು ರಕ್ಷಿಸು.” ಹೀಗೆಂದು ಈ ಭಾಗವತರೆಲ್ಲಾ ಸೇರಿ ಮೊರೆಯಿಟ್ಟರೂ ಸ್ವಾಮಿಯು ಯಾವ ಪ್ರತ್ಯುತ್ತರವನ್ನು ಕೊಡದಿರಲು, ಇವರು ಪುರುಷಕಾರಭೂತೆಯಾದ ಮಹಾಲಕ್ಷ್ಮಿಯನ್ನು ಸಮೀಪಿಸಿ—ಭಗವದ್ವಿಷಯ ಗ್ರಾಹಕವಾಗಿಯೂ ತದ್ವಿಷಯವಿರಹಾಸಹಿಷ್ಣುವಾಗಿಯೂ ಇರುವ ಪರಮ ಭಕ್ತಿಯನ್ನುಳ್ಳಂಥಾ, ವಿಷಯಾಂತರ ವೈರಾಗ್ಯ ಸಂಪತ್ತುಳ್ಳಂಥಾ, ಪುರುಷಕಾರಭೂತೆಯಾದ ಲಕ್ಷ್ಮೀದೇವಿಯೇ, ನೀನು ಪ್ರಬುದ್ಧಳಾಗಬೇಕು. ಸ್ವಾಮಿ ಕೈಂಕರ್ಯದಲ್ಲಿ ಅಹಂಕಾರ ಮಮಕಾರ ನಿವೃತ್ತಿಯು, ಯಥಾವಸ್ಥಿತ ಸ್ವರೂಪ ಜ್ಞಾನವು, ಇವೆರಡರ ಪುರಸ್ಸರವಾಗಿ ಸರ್ವೇಶ್ವರನಾದ ಶ್ರೀಕೃಷ್ಣನನ್ನು ಎಚ್ಚರಗೊಳಿಸಿ, ಭವ್ಯನಾದ ಅವನನ್ನೂ ದಾಸಭೂತರಾದ ಎಮ್ಮನ್ನೂ ಈಗಲೇ ಸಂಶ್ಲೇಷಿಸುವಹಾಗೆ ನೀನು ಮಾಡಬೇಕು; ಹಾಗೆ ಮಾಡಿದರೆ ನಮ್ಮ ಭಗವತ್ಕೈಂಕರ್ಯರೂಪವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು ಎಂದು ವಿನಯದಿಂದ ಬೇಡಿಕೊಂಡರು.

---

20. “O Great Lord, capable of removing beforehand even the least fear of interruption to the continuity of the infinite knowledge (which is brought about by their contact with Prakriti,) of Thy myriads of devotees endowed by nature with infinite wisdom! be graciously pleased to wake from Thy conscious sleep, and favour us with an interview. Most Impartial Lord! inaccessible to non-devotees, but ever ready to remove all obstacles causing fear and anxiety to Thy devotees! O Pure Spirit, arise and save us all”—thus fervently prayed the devotees of the Lord. When they saw that no kind of answer was vouchsafed them, they began to reflect thus. “We seem to have adopted a wrong procedure, we should have approached Him through the proper channel—through the chief *mediator* Lakshmi, His Consort. With such a resolution they approached the presence of Lakshmi and thus addressed—“O Mother! our *mediator and saviour*, blessed with special devotion and fervour that do not allow of any other impressions being perceived by thy mind, and solely absorbed in the uninterrupted enjoyment of the Lord, be pleased to arise, and arrange to give us an interview with the Lord so that we may approach His Presence with the absence of all feelings of vanity in our devotional service to the Lord, and with the true spirit and knowledge of our nature, as His sole dependents. If thou shouldst kindly oblige us, your servants, so far, we shall be in a fair way to bring the special vow to a successful fruition—the vow consisting in holding *communion* with the Lord and in the uninterrupted enjoyment of His Glory, Mercy, Goodness, and other Excellences.

ಏಱ್ಱಕಲಙ್ಗಳೆದಿರ್ಪೊಙ್ಗಿಮೀದಳಿಪ್ಪ |
ಮಾಱ್ಱಾದೇಪಾಲ್ಶೊರಿಯುಂವಳ್ಳಪ್ಪೆರುಂಪಶುಕ್ಕ ‖
ಆಱ್ಱಪ್ಪಡೈತ್ತಾನ್ಮಗನೇಯಱಿವುಱಾ |
ಊಱ್ಱಮುಡೈಯಾಯ್ಪೆರಿಯಾಯುಲಕಿನಿ ‖
ತೋಱ್ಱಮಾಯ್ನಿನ್ಱಶುಡರೇತುಯಿಲೆೞಾಯ್ |
ಮಾಱ್ಱಾರುನಕ್ಕುವಲಿತೊಲೈನ್ದುನ್ವಾಶಱ್ಕಣ್ ‖
ಆಱ್ಱಾದುವನ್ದುನ್ನಡಿಪಣಿಯುಮಾಪೋಲೇ |
ಪೋಱ್ಱಿಯಾಂವನ್ದೋಂಪುಕೞ್ನ್ದೇಲೋರೆಂಪಾವಾಯ್ ‖ ... ‖೨೧

### ಪ್ರತಿಪದಾರ್ಥ.

ಏಱ್ಱಕಲಙ್ಗಳ್—ಹಾಲುತುಂಬುವ ಕಲಶಗಳು
ಎದಿರ್ಪೊಙ್ಗಿ—ಉಬ್ಬಿ ಬಂದು
ಮೀದಳಿಪ್ಪ—ಹೊರಗೆ ಚೆಲ್ಲುವಹಾಗೆ ಆಗಲು
ಮಾಱ್ಱಾದೇ—ಎಡೆಬಿಡದೆ
ಪಾಲ್ಶೊರಿಯುಂ—ಹಾಲನ್ನು ಕಱೆಯುವ
ವಳ್ಳಲ್ ಪೆರುಂಪಶುಕ್ಕಳ್—ಸಾಧುಗಳಾದ ಒಳ್ಳೆಯ ಜಾತೀ ಹಸುಗಳನ್ನು
ಆಱ್ಱಪ್ಪಡೈತ್ತಾನ್—ಬೇಕಾದಷ್ಟುಳ್ಳ ಶ್ರೀನಂದಗೋಪನ
ಮಗನೇ—ಮಗನಾದ ಶ್ರೀಕೃಷ್ಣನೇ
ಅಱಿವುಱಾಯ್—ಪ್ರಭೋಧವನ್ನು ಹೊಂದಬೇಕು
ಊಱ್ಱಮುಡೈಯಾಯ್—ಅಪ್ರತಿಹತವಾದ ದಾರ್ಢ್ಯವುಳ್ಳವನೇ
ಪೆರಿಯಾಯ್—ಮಹಾತ್ಮನೇ
ಉಲಕಿನಿಲ್—ಲೋಕದಲ್ಲಿ
ತೋಱ್ಱಮಾಯ್ನಿನ್ಱ—ದೇದೀಪ್ಯಮಾನವಾಗಿ ನಿಂತ
ಶುಡರೇ—ತೇಜಃಪುಂಜವೇ
ತುಯಿಲೆೞಾಯ್—ಸುಖನಿದ್ರೆಯಿಂದ ಪ್ರಬುದ್ಧನಾಗು
ಮಾಱ್ಱಾರ್—ಶತ್ರುಗಳು
ಉನಕ್ಕುವಲಿತೊಲೈನ್ದು—ನಿನ್ನನ್ನುನೋಡಿ ತಮ್ಮಶಕ್ತಿ ಉಡುಗಿ
ಉನ್ ವಾಶಲ್‌ಕಣ್—ನಿನ್ನ ಬಾಗಿಲಲ್ಲಿ
ಆಱ್ಱಾದುವನ್ದು—ಅಸಮರ್ಥರಾಗಿಬಂದು
ಉನ್ನಡಿಪಣಿಯುಮಾಪೋಲೇ—ನಿನ್ನ ದಿವ್ಯಪಾದಂಗಳನ್ನು ಸೇವಿಸುವಹಾಗೆಯೇ
ಪೋಱ್ಱಿಯಾಂ—ನಾವೂ ಮಂಗಳಾಶಾಸನವನ್ನು ಮಾಡಿಕೊಂಡು
ವನ್ದೋಂ—ಆಶ್ರಯಿಸಿದೆವು
ಪುಕೞ್ನ್ದು—ಹೀಗೆ ಅವನನ್ನು ಕೊಂಡಾಡಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆಱವೇಱುವುದು.

### ತಾತ್ಪರ್ಯ.

ಹಾಲು ತುಂಬುವ ಕಲಶಗಳೆಲ್ಲಾ ತುಂಬಿ ಉಬ್ಬಿಬಂದು, ಹಾಲು ಹೊರಗೆ ಚೆಲ್ಲುವಷ್ಟು ಸಮೃದ್ಧಿಯಾಗಿ ಕಱೆಯುವ ಉತ್ತಮಜಾತಿಯಾದ ಸಾಧುಗೋವುಗಳ ವಿಶೇಷಸಂಪತ್ತಿನಿಂದ ಆಢ್ಯನಾದ ಶ್ರೀನಂದಗೋಪನ ಪುತ್ರನಾದ ಶ್ರೀಕೃಷ್ಣನೇ, ಪ್ರಭೋಧವನ್ನು ಹೊಂದಬೇಕು. ಅಪ್ರತಿಹತವಾದ ದಾರ್ಢ್ಯವುಳ್ಳವನೇ, ಮಹಾತ್ಮನೇ, ಲೋಕದಲ್ಲೆಲ್ಲಾ ದೇದೀಪ್ಯಮಾನವಾಗಿ ನೆಲೆಯಾಗಿನಿಂತ ತೇಜಃಪುಂಜವೇ ! ಸುಖನಿದ್ರೆಯಿಂದ ಪ್ರಬುದ್ಧನಾಗಬೇಕು. ಶತ್ರುಗಳು ನಿನ್ನ ಸಾಮರ್ಥ್ಯವನ್ನು ನೋಡಿ ತಮ್ಮ ಶಕ್ತಿಯುಡುಗಿ, ನಿನ್ನ ಬಾಗಿಲಲ್ಲಿ ದೀನರಾಗಿ ಬಂದು, ನಿನ್ನ ದಿವ್ಯ ಪಾದಂಗಳನ್ನು ಸೇವಿಸುವಹಾಗೆಯೇ, ಪ್ರಯೋಜನಾಂತರಪರರಲ್ಲದೆ ನಾವೂ ನಿನ್ನನ್ನು ಮಂಗಳಾಶಾಸನ ಮಾಡಿಕೊಳ್ಳುತ್ತ ಆಶ್ರಯಿಸಿರುತ್ತೇವೆ. ಹಾಗೆ ನಿನ್ನನ್ನು ಸಾಕ್ಷಾತ್ತಾಗಿ ನಾವು ಸೇವಿಸಿ ಕೊಂಡಾಡಲಾಗಿ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆಱವೇಱುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ತಾವು ಹೇಳಿದ ರಹಸ್ಯಾರ್ಥೋಪದೇಶದಿಂದ ಪರಿಪೂರ್ಣಜ್ಞಾನವನ್ನು ಹೊಂದಿದ ಶಿಷ್ಯರು ತಮಗೇನೇ (ಆಚಾರ್ಯರಿಗೆ) ಪೂರ್ವದಲ್ಲಿ ವಿಶದಪಡಿಸಿದ ಅರ್ಥಪುಷ್ಟಿಗಾಗಿ ನೂತನ ಯುಕ್ತಿಗಳನ್ನು ಉಪದೇಶಮಾಡತಕ್ಕ ಸಾಮರ್ಥ್ಯವುಳ್ಳವರಾಗಲು, ಇಂತಹ ಶಿಷ್ಯಸಂಪತ್ತನ್ನು ಕಂಡು ಸಂತೋಷಿಸಿ ಆ ರಹಸ್ಯಾರ್ಥದ ಮಹಿಮೆಯನ್ನು ಕೊಂಡಾಡುವ ಆಚಾರ್ಯರಿಗೆ ಪುತ್ರತ್ವೇನ ಭಾವಿಸಲ್ಪಡುವ ಶ್ರೀಕೃಷ್ಣನೇ, ಯೋಗನಿದ್ರೆಯಿಂದ ಪ್ರಬುದ್ಧನಾಗಬೇಕು. ಶಾಬ್ದಪ್ರಮಾಣಾದಿಗಳಿಂದ ಸಿದ್ಧನಾದವನೇ! ಅಪರಿಚ್ಛಿನ್ನ ಸ್ವರೂಪರೂಪಗುಣವಿಭೂತಿಯುಳ್ಳವನೇ, ಲೋಕದವರೆಲ್ಲಾ ಅಱಿಯುವಹಾಗೆ ಚಕ್ಷುರ್ವಿಷಯನಾಗಿ ಅವತರಿಸಿದ ತೇಜಃಪುಂಜನೇ! ರಕ್ಷಣೋದ್ಯೋಗದಲ್ಲಿ ಗಮನವನ್ನು ಕೊಡು. ಬಲಪರಾಕ್ರಮದಲ್ಲಿ ತಮಗೆ ಯಾರೂ ಸಮನಲ್ಲವೆಂದು ಅಹಂಕಾರಪಡುತ್ತಿದ್ದ ನಿನ್ನ ಲೌಕಿಕಶತ್ರುಗಳು ನಿನ್ನ ಅಸದೃಶವಾದ ಮಹಾವೀರ್ಯವನ್ನು ಕಂಡು ಶಕ್ತಿಯುಡುಗಿ ಕೊನೆಗೆ ನಿನ್ನ ದಿವ್ಯ ಪಾದಂಗಳಲ್ಲಿ ಶರಣಾಗತರಾಗುವಹಾಗೆಯೇ, ದಾಸಭೂತರಾದ ನಾವು ನಿನ್ನ ನಿರುಪಾಧಿಕ ಶೇಷಿತ್ವಕ್ಕೆ ಒಳಪಟ್ಟು ದೇಹಾತ್ಮಾಭಿಮಾನವನ್ನೂ ಸ್ವಸ್ವಾತನ್ತ್ರ್ಯವನ್ನೂ ಅನ್ಯಶೇಷತ್ವವನ್ನೂ ಸ್ವಾಧೀನಕರ್ತೃತ್ವ ಭೋಕ್ತೃತ್ವಂಗಳನ್ನೂ ಉಪಾಯೋಪೇಯಾನ್ತರಂಗಳನ್ನೂ ಬಿಟ್ಟು ನೀನೇ ಸಮಸ್ತ ಪ್ರಾಪ್ಯಪ್ರಾಪಕನೆಂದು ಶರಣಹೊಂದಿ ನಿನ್ನನ್ನು ಮಂಗಳಾಶಾಸನಮಾಡಿ ಕೊಂಡಾಡುತ್ತಿರುವೆವು. ಹಾಗೆ ಶರಣಾಗತರಾದ ನಮ್ಮನ್ನು ನೀನು ಕೃಪೆಮಾಡಿ ರಕ್ಷಿಸಿದರೆ, ನಮ್ಮ ಭಗವತ್ಕೈಂಕರ್ಯರೂಪವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆಱವೇಱುವುದು.

---

21. The disciples that had been initiated in the mysteries of the *holy mantras* by their spiritual preceptors, were so well instructed in the same that the revelation of *true knowledge* which they secured, has enabled them to expound the same doctrines with fresh light so as to edify even their own preceptors—so profound is the depth of meaning imbedded in the mantras, and so wise and competent were the disciples that expounded them! O Lord Srikrishna! Who art so beloved, as a *son*, unto the great teacher, who owns beings of that description as his disciples, be pleased to awake from thy conscious sleep. O great Being! whose reality is determined and proved beyond all doubt by the test of "word-inference," (ಶಬ್ದಪ್ರಮಾಣ) perception, and such other tests. Inscrutable is Thy Nature, Form, Quality, and Government. Thou Great Fountain of Light, that appeared in flesh and blood in several incarnations, so that all may have an ocular demonstration of thee, be gracious enough to extend Thy Protection to the world. Thine enemies in this mundane world, though affected at first with the vanity that they were matchless in heroism and valour, found out their mistake at the end when they opposed Thee, and took shelter with Thee at last; while we, Thy humble servants, took refuge with Thee long ago, knowing no other Saviour than Thyself, the *end and aim* of all our aspirations, lovingly submitting to Thy Noble Governmet and giving up all our mistaken ideas of independence, ever relying upon Thy mercy as our sole enjoyment and refuge, and singing Thy hymns. Shouldst Thou deign to extend Thy Grace and protect us, Thy humble devotees, we shall be in a fair way to bring the special vow to a successful fruition—the vow consisting in holding *communion* with the Lord, and in the uninterrupted enjoyment of His Glory, Mercy, and other excellences.

ಅಙ್ಗಣ್ಮಾಞಾಲತ್ತರಶರಭಿಮಾನ |
ಪಙ್ಗಮಾಯ್ವನ್ದುನಿನ್ಪಳ್ಳಿಕ್ಕಟ್ಟಿಱ್ಕೀೞೇ ॥
ಶಙ್ಗಮಿರುಪ್ಪಾರ್ಪೋಲ್ವನ್ದುತಲೈಪ್ಪೆಯ್ದೋಂ |
ಕಿಙ್ಕಿಣಿವಾಯ್ಚ್ಚೆಯ್ದತಾಮರೈಪ್ಪೂಪ್ಪೋಲೇ ॥
ಶೆಙ್ಗಣ್ಶಿಱುಚ್ಚಿಱಿದೇಯೆಮ್ಮೇಲ್ವಿೞಿಯಾವೋ |
ತಿಙ್ಗಳುಮಾದಿತ್ತಿಯನುಮೆೞುನ್ದಾಪ್ಪೋಲ್ ॥
ಅಙ್ಗಣಿರಣ್ಡುಙ್ಕೊಣ್ಡೆಙ್ಗಣ್ಮೇನೋಕ್ಕುದಿಯೇ |
ಎಙ್ಗಣ್ಮೇಶಾಪಮಿೞಿನ್ದೇಲೋರೆಂಪಾವಾಯ್ ॥ .. ॥೨೨॥

## ಪ್ರತಿಪದಾರ್ಥ.

ಅಙ್ಗಣ್ಮಾಞಾಲತ್ತು—ರಮ್ಯವಾಗಿಯೂ ವಿಶಾಲವಾಗಿಯೂ ಇರುವ ಭೂಮಿಯಲ್ಲಿ
ಅರಶರ್—ಶತ್ರುರಾಜರು
ಅಭಿಮಾನಭಙ್ಗಮಾಯ್—ತಮಗೆ ಸಮಾನರು ಯಾರೂ ಇಲ್ಲವೆಂಬಗರ್ವವನ್ನು ಬಿಟ್ಟು
ವನ್ದು—ಬಂದು
ನಿನ್ಪಳ್ಳಿಕ್ಕಟ್ಟಿಲ್ಕೀೞೇ—ನಿನ್ನ ಪರ್ಯಙ್ಕದಕೆಳಗೆ
ಶಙ್ಗಮಿರುಪ್ಪಾರ್ಪೋಲ್—ಸಂಘವಾಗಿ ನಿಂತಿರುವವರ ಹಾಗೆ
ವನ್ದುತಲೈಪ್ಪೆಯ್ದೋಂ—ಬಂದು ಸೇರಿದ್ದೇವೆ
ಕಿಙ್ಕಿಣಿವಾಯ್ ಶೆಯ್ದ—ಕಿರುಗಂಟೆಯಹಾಗೆ ಅರ್ಧ ವಿಕಸಿತವಾದ
ತಾಮರೈಪ್ಪೂಪ್ಪೋಲೇ—ತಾವರೇಹೂವಿನಹಾಗೆ (ಇರುವ)
ಶೆಙ್ಗಣ್—ಕೆಂಪಡರ್ದ ದಿವ್ಯನೇತ್ರಗಳನ್ನು
ಶಿಱುಚ್ಚಿಱಿದೇ—ಸ್ವಲ್ಪಸ್ವಲ್ಪವಾಗಿ
ಎಮ್ಮೇಲ್—ನಮ್ಮಗಳಮೇಲೆ
ವಿೞಿಯಾವೋ—ಇಟ್ಟುನೋಡಲಾಗದೋ
ತಿಙ್ಗಳುಂ, ಆದಿತ್ತಿಯನುಂ—ಚಂದ್ರನೂ ಸೂರ್ಯನೂ
ಎೞುನ್ದಾಲ್ಪೋಲ್—ಉದಯಿಸಿದಹಾಗೆ
ಅಂಕಣಿರಣ್ಡುಂಕೊಣ್ಡು—ಸುಂದರವಾದ ನೇತ್ರದ್ವಯಂಗಳಿಂದ
ಎಙ್ಗಳ್ಮೇಲ್ನೋಕ್ಕುದಿಯೇಲ್—ನಮ್ಮಮೇಲೆ ಕಟಾಕ್ಷಿಸಿದ್ದೇ ಆದರೆ
ಎಙ್ಗಳ್ಮೇಲ್ಶಾಪಂಇೞಿನ್ದು—ನಮ್ಮವ್ಯಸನವು ನೀಗಿ
ಎಲ್, ಓರ್—ತಕ್ಕ, ಅದ್ವಿತೀಯವಾದ (ಹೋಗಲು
ಎಂಪಾವೈಆಯ್—ನಮ್ಮ ವ್ರತವು ಶುಭವಾಗಿಯೂ ಸಾಂಗವಾಗಿಯೂ ತೀರ್ಗಡೆಯಾಗುವುದು

## ತಾತ್ಪರ್ಯ.

ರಮ್ಯವಾಗಿಯೂ ವಿಶಾಲವಾಗಿಯೂ ಇರುವ ಈ ಭೂಮಂಡಲದಲ್ಲಿ, ತಮಗೆಸಮಾನರು ಯಾರೂ ಇಲ್ಲವೆಂಬ ಗರ್ವದಿಂದ ಮೆರೆಯುತ್ತಿದ್ದ ನಿನ್ನ ಶತ್ರುರಾಜರೆಲ್ಲಾ ಈಗ ಭಙ್ಗಪಟ್ಟು ನಿನಗೆ ಶರಣಾಗತರಾಗಿ ಬಂದು ನಿನ್ನ ಪರ್ಯಙ್ಕದಕೆಳಗೆ ಸಂಘವಾಗಿ ನಿಂತಿರುವರು; ಅನನ್ಯಪ್ರಯೋಜನರಾದ ನಾವೂ ಅವರಹಾಗೆಯೇ ನಿನ್ನ ಶರಣ ಹೊಂದಿ ಇಲ್ಲಿಗೆ ಬಂದು ನಿಂತಿದ್ದೇವೆ. ಕಿರುಗಂಟೆಯಹಾಗೆ ಅರ್ಧ ವಿಕಸಿತವಾದ ತಾವರೇಹೂವಿನಂತೆ ಮನೋಹರವಾಗಿರುವ ಕೆಂಪಡರ್ದ ನಿನ್ನ ದಿವ್ಯನೇತ್ರಂಗಳನ್ನು ಸ್ವಲ್ಪ ಸ್ವಲ್ಪವಾಗಿ ಬಿಟ್ಟುಕೊಂಡು ನಿನ್ನ ಕೃಪಾಕಟಾಕ್ಷವೀಕ್ಷಣದಿಂದ ದಾಸಭೂತರಾದ ನಮ್ಮನ್ನು ನೋಡಲಾಗದೋ ! ಚಂದ್ರನೂ ಸೂರ್ಯನೂ ಏಕಕಾಲದಲ್ಲಿ ಉದಯಿಸಿದಹಾಗೆ ಪ್ರಕಾಶಮಾನವಾಗಿರುವ ಸುಂದರವಾದ ನಿನ್ನ ನೇತ್ರದ್ವಯಂಗಳಿಂದ, ನಮ್ಮಮೇಲೆ ನಿನ್ನ ಕರುಣಾದೃಷ್ಟಿಪಾತವು ಬಿದ್ದದ್ದೇಯಾದರೆ, ನಮ್ಮ ವ್ಯಸನವೂ ಪಾಪಂಗಳೂ ನೀಗಿ, ನಾವು ಈಗ ಮಾಡುವ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

## ಸ್ವಾಪದೇಶಾರ್ಥ—ರಹಸ್ಯಾರ್ಥ.

ಎಲೈ ಸ್ವಾಮಿಯೇ, ಈ ಭೂಮಂಡಲವೆಲ್ಲಾ ತಮಗೇಸೇರಿದ್ದೆಂದು ಅಹಂಕಾರಪಡುತ್ತಿದ್ದ ರಾಜಾಧಿರಾಜರು ಶಕ್ತಿಯುಡುಗಿ ಅಂಥಾ ಅಭಿಮಾನವನ್ನು ಬಿಟ್ಟು ಕೊನೆಗೆ ನಿನ್ನ ಪರ್ಯಙ್ಕದ ಸಮೀಪದಲ್ಲಿ ಸಂಘಸಂಘವಾಗಿ ಶರಣಾಗತರಾಗಿರುವಹಾಗೆಯೇ ನಾವೂ ಅಹಂಕಾರ ಮಮಕಾರಾದಿಗಳನ್ನು ಬಿಟ್ಟು ನಿನ್ನನ್ನು ಆಶ್ರಯಿಸಿದೇವೆ. ಸರ್ವಲೋಕಶರಣ್ಯನಾದ ಶ್ರೀ ಕೃಷ್ಣನೇ! ನಮ್ಮ ಅಜ್ಞಾನವನ್ನು ನಿವೃತ್ತಿಮಾಡುವ ನಿನ್ನ ಕಟಾಕ್ಷವು ಯಾವಾಗ ನಮ್ಮ ಮೇಲೆ ಬೀಳುವುದೋ ಎಂದು ಕಾದುಕೊಂಡಿರುವೆವು; ಆದಕಾರಣ ನಿನ್ನ ಕೃಪಾಕಟಾಕ್ಷವು ಕೊಂಚಕೊಂಚವಾಗಿಯೇ ಬೀಳಲಿ. ಹಾಗೆ ನಿನ್ನ ಕೃಪೆಗೆ ನಾವು ಪಾತ್ರರಾದಲ್ಲಿ, ನಮ್ಮ ದೇಹಾತ್ಮಾಭಿಮಾನವು ನೀಗುವುದು, ಶೇಷತ್ವಜ್ಞಾನವು ಪ್ರಾಪ್ತಿಯಾಗುವುದು, ಉಪಾಯಾಂತರ ತ್ಯಾಗವು ಉಂಟಾಗುವುದು, ತದನಂತರ ಸ್ವವ್ಯಾಪಾರದಲ್ಲಿ ಸ್ವಾಧೀನ ಕರ್ತೃತ್ವಜ್ಞಾನವು ನಿವೃತ್ತವಾಗುವುದು, ತರುವಾಯ ಸರ್ವೇಶ್ವರನಾದ ನಿನ್ನ ಕಲ್ಯಾಣಗುಣಾನುಭವವು ಉಂಟಾಗುವುದು. ಹೀಗೆ ಕೃಪೆಮಾಡಿ ನಮಗೆ ನಿನ್ನಲ್ಲಿ ಪರಮಭಕ್ತಿ ಸಂಪತ್ತು ಉಂಟಾಗುವಂತೆ ನೀನು ಪೂರ್ಣಕಟಾಕ್ಷವಿಟ್ಟರೆ, ಅವಶ್ಯಾನುಭಾವ್ಯವಾದ ಭಗವದ್ವಿಶ್ಲೇಷ ಸಂಕಟವು ನೀಗಿ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

---

22 O Lord! we, Thine humble devotees, have all, as a united band, approached Thee, and taken refuge with Thee, giving up our mistaken ideas of egoity [self-love and vanity,] in the same manner as several earthly sovereigns, puffed up with the wrong notion that the over-lordship of the universe belongs to themselves, had at last found out their mistake, and renouncing such vanity, have now in several batches congregated near Thy Couch, piteously seeking shelter at Thy Golden Feet. O Lord Srikrishna, the Saviour of the world! we have been anxiously waiting for the favour of Thy Gracious Look which will surely remove our ignorance; hence may Thy Side-glance be gradually directed unto us, as a token of Thy Grace! When we are thus influenced by Thy Mercy, our 'idea of self' will in consequence disappear! The conception of our sole dependence on Thee will be firmly secured, and the renunciation of all other hopes of *salvation* than Thyself will prevail: any idea of independent action in all our dealings or the idea of our agency will vanish; and, lastly, will shine forth resplendent the glory of our enjoyment of Thy Infinite Beauty and Excellences. Thus happily circumstanced, if we should secure the blessing of Thy Presence out of the fulness of Thy Grace, we shall undoubtedly get rid of our afflictions, which will have to be necessarily endured otherwise; and then we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences.

ಮಾರಿಮಲೈಮುೞಞ್ಜಿನ್ಮನ್ನಿಕ್ಕಿಡನ್ದುಱಙ್ಗುಂ ।
ಶೀರಿಯಶಿಙ್ಗಮಱಿವುಱ್ಱುತ್ತೀವಿೞಿತ್ತು ॥
ವೇರಿಮಯಿರ್ಪೊಙ್ಗವೆಪ್ಪಾಡುಂಪೇರ್ನ್ದುದಱಿ ।
ಮೂರಿನಿಮಿರ್ನ್ದುಮುೞಙ್ಗಿಪ್ಪುಱಪ್ಪಟ್ಟು ॥
ಪ್ಪೋದರುಮಾಪ್ಪೋಲೇನೀಪ್ಪೂವೈಪ್ಪೂವಣ್ಣಾವು ।
ನ್ಕೋಯಿನಿನ್ಱಿಙ್ಗನೇಪ್ಪೋನ್ದರುಳಿಕ್ಕೋಪ್ಪುಡೈಯ ॥
ಶೀರ್ಱಿಯಶಿಙ್ಗಾಶನತ್ತಿರುನ್ದುಯಾಂವನ್ದ
ಕಾರಿಯಮಾರಾಯ್ನ್ದರುಳೇಲೋರೆಂಪಾವಾಯ್ ॥ ... ॥೨೩॥

ಪ್ರತಿಪದಾರ್ಥ.

ಮಾರಿ—ಮಳೆಗಾಲದಲ್ಲಿ
ಮಲೈಮುೞಞ್ಜಿಲ್—ಪರ್ವತದ ಗುಹೆಯಲ್ಲಿ
ಮನ್ನಿ ಕಿಡನ್ದು ಉಱಙ್ಗುಂ—ನೆಲೆಯಾಗಿ ವಾಸಮಾಡಿಕೊಂಡು ನಿದ್ರೆಮಾಡುವ
ಶೀರಿಯ ಶಿಙ್ಗಂ—ವೀರ್ಯವುಳ್ಳ ಸಿಂಹವು
ಅಱಿವು ಱ್ಱು—ಎಚ್ಚರಗೊಂಡು
ತೀವಿೞಿತ್ತು—ಬೆಂಕಿಯ ಕಿಡಿಗಳನ್ನು ಹಾರಿಸುವಹಾಗೆ ಕಣ್ಣುಬಿಟ್ಟು
ವೇರಿ ಮಯಿರ್ ಪೊಙ್ಗ—ಸಟಾರೋಮಗಳು ನಿಂತುಕೊಳ್ಳಲು (ರೋಮಾಂಚಿತವಾಗಲು)
ಎಪ್ಪಾಡುಂ ಪೇರ್ನ್ದು ಉದಱಿ—ನಾಲ್ಕು ಕಡೆಯೂ ಮೈ ಒದರಿಕೊಂಡು
ಮೂರಿನಿಮಿರ್ನ್ದು—ಜೋಗುತನವನ್ನು ಮುರಿದು
ಮುೞಙ್ಗಿ—ಶಬ್ದಮಾಡಿ, ಆರ್ಭಟಿಸಿ
ಪುಱಪ್ಪಟ್ಟು—ಗುಹೆಯಿಂದ ಹೊರಗೆ ಹೊರಟು
ಪೋದರುಮಾಪೋಲೆ—ಬರುವಹಾಗೆ
ನೀ ಪೂವೈಪ್ಪೂವಣ್ಣಾ—ಅತಸೀಪುಷ್ಪದವರ್ಣವುಳ್ಳ ನೀನು
ಉನ್ ಕೋಯಿಲ್ ನಿನ್ಱು—ನಿನ್ನ ದಿವ್ಯವಾದ ಅರಮನೆಯಿಂದ
ಇಙ್ಗನೇಪೋನ್ದರುಳಿ—ಈ ಮಣಿಮಂಟಪಕ್ಕೆ ದಯಮಾಡಿಸಿ
ಕೋಪ್ಪುಡೈಯ—ಮಹಿಮೆಗೊಂಡ
ಶೀರಿಯಶಿಙ್ಗಾಶನತ್ತು—ಯೋಗ್ಯವಾದ ಸಿಂಹಾಸನದಲ್ಲಿ
ಇರುನ್ದು—ಆರೂಢನಾಗಿ
ಯಾಂ ವನ್ದಕಾರಿಯಂ—ದಾಸಭೂತರಾದ ನಾವು ಬಂದ ಕೆಲಸವನ್ನು
ಆರಾಯ್ನ್ದರುಳಿ—ವಿಚಾರಿಸಿ ಕೃಪೆಮಾಡಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆರವೇರುವುದು.

ತಾತ್ಪರ್ಯ.

ವರ್ಷಾಕಾಲದಲ್ಲಿ ಪರ್ವತದ ಗುಹೆಯನ್ನೇ ತನ್ನ ನೆಲೆಯಾದ ವಾಸಸ್ಥಾನವೆಂದು ಮಾಡಿಕೊಂಡು, ಸುಖನಿದ್ರೆಮಾಡುತ್ತಾ ತನ್ನ ವೀರ್ಯಪರಾಕ್ರಮದಿಂದ 'ಮೃಗರಾಜ' ನೆಂಬ ಪಟ್ಟವನ್ನು ವಹಿಸಿದ ಸಿಂಹವು ಎಚ್ಚರಗೊಂಡು ಬೆಂಕಿಯ ಕಿಡಿಯನ್ನು ಸುರಿಸುವಂತೆ ಕಣ್ಣುಬಿಟ್ಟುಕೊಂಡು, ತನ್ನ ಉತ್ಸಾಹಸೂಚಕವಾಗಿ ಸಟಾರೋಮಂಗಳು ರೋಮಾಂಚಿತವಾಗಲು, ನಾಲ್ಕುಕಡೆಯನ್ನೂ ದೃಷ್ಟಿಸಿನೋಡಿ ಮೈ ಒದರಿಕೊಂಡು, ಜೋಗುತನವನ್ನು ಮುರಿದು ಘಟ್ಟಿಯಾಗಿ ಆರ್ಭಟಿಸಿ ಗುಹಾಂತರಾಳದಿಂದ ಗಂಭೀರಯಾನದಲ್ಲಿ ಹೊರಗೆ ಹೊರಟುಬರುವ ಹಾಗೆಯೇ, ಎಲೈ ಜಗನ್ನಾಥನಾದ ಶ್ರೀಕೃಷ್ಣನೇ, ಅತಸೀಪುಷ್ಪಸಂಕಾಶನಾದ ನೀನೂ ದಿವ್ಯವಾದ ನಿನ್ನ ಅರಮನೆಯನ್ನು ಬಿಟ್ಟು ಹೊರಗೆ ಬಿಜಮಾಡಿ, ಈ ಮಣಿಮಂಟಪಕ್ಕೆ ದಯಮಾಡಿಸಿ, ಮಹಿಮೆಗೊಂಡ ಈ ಯೋಗ್ಯವಾದ ರತ್ನಸಿಂಹಾಸನದಲ್ಲಿ ಆರೂಢನಾಗಿ, ದಾಸಭೂತರಾದ ನಾವು ಬಂದ ಕೆಲಸವನ್ನು ಪ್ರೀತಿಯಿಂದ ವಿಚಾರಿಸಿ ಕೃಪೆಮಾಡಲು, ನಮ್ಮ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಮಹಾಪ್ರಳಯಕಾಲದಲ್ಲಿ ಲೋಕವೆಲ್ಲಾ ತಮೋಭಿಭೂತವಾಗಿರಲು, ಎಲೈ ಪರಾತ್ಪರನೇ, ನೀನೊಬ್ಬನೇ ಅವಶಿಷ್ಟನಾಗಿ ವೇದರಾಶಿಗಳಿಗೆ ಶಿರೋಭೂಷಣವಾದ ಉಪನಿಷದ್ಭಾಗದಲ್ಲಿ ಪರಿಸಿ ಯೋಗನಿದ್ರೆಮಾಡುತ್ತಿರಲಾಗಿ, ನೀನು ಪುನಸ್ಸೃಷ್ಟ್ಯುನ್ಮುಖನಾದಾಗ, ಸಮಯ ನಿರೀಕ್ಷಣೆಯನ್ನು ಅಱಿತ ಶ್ರೀಮಹಾಲಕ್ಷ್ಮಿಗೂ ಸಮೀಪಿಸಲು ಅಸಾಧ್ಯವಾಗುವಂತೆ ತೀಕ್ಷ್ಣವಾಗಿ ಕಟಾಕ್ಷಿಸಿ, ತನ್ನ ದಿವ್ಯದೆ ಸಗಂಧವು ಎಲ್ಲೆಲ್ಲಿಯೂ ಪರಿಮಳಿಸುವಂತೆ ಜಗತ್ಸೃಷ್ಟಿಯಲ್ಲಿ ಉದ್ಯುಕ್ತನಾಗಿ, ಅವಿಭಕ್ತನಾಮರೂಪನೊಡನೆ ಸ್ವಾವಯವವಿಶಿಷ್ಟನಾದ ನೀನು ದಂಡಾಕಾರವಾಗಿ ದೀರ್ಘೀಭವಿಸಿ, ಪಿಂಡಾಕಾರವಾಗಿ ಎದ್ದು ಮಹಾಸಂಭ್ರಮದೊಡನೆ ಮಹದಾದಿರೂಪೇಣಪ್ರಕೃತಿಯಿಂದ ಬೇಱೆಯಾಗಿ ಪ್ರಕಾಶಿಸಿ ಹೊಱಗೆ ಬರುವಹಾಗೆಯೇ, ಅತಸೀಪುಷ್ಪಚ್ಛಾಯನಾದ ಶ್ರೀಕೃಷ್ಣನೇ, ನಿನ್ನ ದಿವ್ಯಾಂತಃಪುರದಿಂದ ಹೊಱಟು "ದ್ವಯ" ವೆಂಬ ಆಸ್ಥಾನಮಂಟಪಕ್ಕೆ ಬಿಜಯಮಾಡಿ, ಲೋಕಂಗಳನ್ನೆಲ್ಲಾ ವಿಭಾಗಿಸಿ ಕಾಪಾಡಿ ನಿನ್ನ ದಾಸಭೂತರಾದವರ ಆರ್ತಿಗಳನ್ನು ಕೇಳಿ ಪರಿಹಾರ ಮಾಡಲು ದಿವ್ಯ ಸಿಂಹಾಸನಾರೂಢನಾಗಿ, ನಿನಗೆ ಅನನ್ಯಾರ್ಹಶೇಷರಾದ ನಾವು ಬಂದ ಕೆಲಸವನ್ನು ವಿಚಾರಿಸಿ, ನಮ್ಮ ಪುರುಷಾರ್ಥಂಗಳನ್ನು ಕೃಪೆಮಾಡಿದರೆ, ನಮ್ಮ ಅದ್ವಿತೀಯವಾದ ಈ ಭಗವತ್ಕೈಂಕರ್ಯರೂಪವ್ರತವು ಸಾಂಗವಾಗಿಯೂ ಶುಭವಾಗಿಯೂ ನೆಱವೇಱುವುದು.

---

23. O Good Lord ! In the final deluge when all is enveloped in darkness, Thou remainest as the sole and companionless Entity, resting Thyself, dimly visible, in the remotest corner of the Upanishads, the most significant jewel (as a diadem) of the Vedâs ! When Thou desirest to renew the creation, Thou art so absorbed in its work, that even on thy beloved consort, Lakshmi, (knowing as she does the suitable opportunity to approach Thee,) Thy unkind glance Thou directest; and developing Thyself into a huge mass, though still undivided, Thou formest Thyself into an organism, prolonging Thy length like an illimitable rod, and then gradually transforming Thyself into an enormous mass, dividest Thyself from 'Prakriti' into *Mahat* with great enthusiasm, and manifestest Thyself as the visible world ! In the same majestic manner, O Lord Srikrishna, brilliant as the Atas-fl wer, be pleased to proceed from Thy palace to the Durbar-hall of *Dwaya,* and occupying therein the high pedestal, giving audience to us all, be gracious enough to give a patient hearing to our humble represntations, and fulfil our request. If Thou shouldst graciously favour us so far, we shall be in a fair way to bring our special vow to a successful fruition— the vow consisting in holding communion with the Lord, and in the uninterrupted enjoyment of His Glory, Mercy, Goodness, and other Excellences.

ಅನ್ಱಿವ್ವುಲಕಮಳನ್ದಾಯಡಿಪ್ಪೋಱ್ಱಿ |
ಶೆನ್ಱಙ್ಗುತ್ತೆನ್ನಿಲಙ್ಗೈಶೆಱ್ಱಾಯ್ತಿಱಲ್ಪೋಱ್ಱಿ ||
ಪೊನ್ಱಚ್ಚಕಡಮುದೈತ್ತಾಯ್ಪುಕೞ್ಪೋಱ್ಱಿ |
ಕನ್ಱುಕುಣಿಲಾವೆಱಿನ್ದಾಯ್ಕೞಲ್ಪೋಱ್ಱಿ ||
ಕುನ್ಱುಕುಡೈಯಾವೆಡುತ್ತಾಯ್ಗುಣಂಪೋಱ್ಱಿ |
ವೆನ್ಱುಪಕೈಕೆಡುಕ್ಕುನಿನ್ಕೈಯಿಲ್ವೇಲ್ಪೋಱ್ಱಿ ||
ಯೆನ್ಱೆನ್ಱುನ್ಶೇವಕಮೇಯೇತ್ತಿಪ್ಪಱೈಕೊಳ್ವಾನ್ |
ನಿನ್ಱುಯಾಂವನ್ದೋಮಿರಙ್ಗೇಲೋರೆಂಪಾವಾಯ್ || ... ||೨೪||

ಪ್ರತಿಪದಾರ್ಥ.

ಅನ್ಱು—ದೇವತೆಗಳು ಕೇಳಿಕೊಂಡಾಗ
ಇವ್ವುಲಕಂ—ಈ ತ್ರಿಲೋಕವನ್ನು
ಅಳನ್ದಾಯ್—(ತ್ರಿವಿಕ್ರಮಾವತಾರದಲ್ಲಿ) ಅಳೆದ ನಿನ್ನ
ಅಡಿಪ್ಪೋಱ್ಱಿ—ದಿವ್ಯಪಾದಂಗಳಿಗೆ ಮಂಗಳ ಉಂಟಾಗಲಿ
ಶೆನ್ಱು ಅಙ್ಗು—ಹೋಗಿ ಅಲ್ಲಿ
ತೆನ್ನಿಲಙ್ಗೈ—ಸುಂದರವಾದ ಲಂಕಾರಾಜ್ಯದ ರಾಕ್ಷಸರನ್ನು
ಶೆಱ್ಱಾಯ್—ನಿರಸನಮಾಡಿದ ನಿನ್ನ
ತಿಱಲ್ಪೋಱ್ಱಿ—ಭುಜಬಲಪರಾಕ್ರಮಕ್ಕೆ ಮಂಗಳ ಉಂಟಾಗಲಿ
ಪೊನ್ಱಚ್ಚಕಡಂ—ರೂಪಗೆಟ್ಟು ನಾಶವಾಗುವಂತೆ ಶಕಟಾಸುರನನ್ನು
ಉದೈತ್ತಾಯ್—ಒದ್ದು ಕೊಂದ ನಿನ್ನ
ಪುಕೞ್ಪೋಱ್ಱಿ—ಯಶಸ್ಸಿಗೆ ಮಂಗಳ ಉಂಟಾಗಲಿ
ಕನ್ಱುಕುಣಿಲಾ—ವತ್ಸರೂಪವಾಗಿ ಬಂದ ಅಸುರನನ್ನು ಕವಣೇಕಲ್ಲಾಗಿ
ಎಱಿನ್ದಾಯ್—ಎಸೆದು ಕೊಂದ ನಿನ್ನ
ಕೞಲ್ಪೋಱ್ಱಿ—ತಿರುವಡಿಗಳಿಗೆ ಮಂಗಳ ಉಂಟಾಗಲಿ
ಕುನ್ಱು—(ಗೋವರ್ಧನ) ಪರ್ವತವನ್ನು
ಕುಡೈಯಾವೆಡುತ್ತಾಯ್—ಛತ್ರಿಯಾಗಿ ಎತ್ತಿ ಗೋವುಗಳನ್ನು ರಕ್ಷಿಸಿದ ನಿನ್ನ
ಗುಣಂಪೋಱ್ಱಿ—ಕರುಣಾಗುಣಕ್ಕೆ ಮಂಗಳಉಂಟಾಗಲಿ
ವೆನ್ಱುಪಕೈಕೆಡುಕ್ಕುಂ—ಜಯಿಸಿ ಶತ್ರು ನಿರಸನ ಮಾಡುವ
ನಿನ್ಕೈಯಿಲ್ವೇಲ್—ನಿನ್ನ ಕೈಯಲ್ಲಿರುವ ಕುಂತಾಯುಧಕ್ಕೆ
ಪೋಱ್ಱಿ—ಮಂಗಳವು ಉಂಟಾಗಲಿ
ಎನ್ಱು ಎನ್ಱು—ಈ ಪ್ರಕಾರವಾಗಿ
ಉನ್ಶೇವಕಮೇ—ನಿನ್ನ ಅದ್ಭುತವಾದ ವೀರ ಚರಿತ್ರವನ್ನು
ಏತ್ತಿಪ್ಪಱೈಕೊಳ್ವಾನ್—ಸ್ತುತಿಸಿ ಪುರುಷಾರ್ಥವನ್ನು ಹೊಂದಲು
ಇನ್ಱುಯಾಂವನ್ದೋಂ—ಈಹೊತ್ತು ನಾವು ಬಂದೆವು
ಇರಙ್ಗು—ನೀನು ಕೃಪೆಮಾಡಲು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆರವೇರುವುದು.

ತಾತ್ಪರ್ಯ.

ಎಲೈ ಸ್ವಾಮಿಯೇ, ನಿನ್ನ ಭಕ್ತರಾದ ದೇವತೆಗಳು ತಮ್ಮ ಅಹವಾಲನ್ನು ನಿನ್ನಲ್ಲಿ ಅರಿಕೆಮಾಡಿಕೊಂಡಾಗ ನೀನು ತ್ರಿವಿಕ್ರಮನಾಗಿ ಅವತರಿಸಿ ಈ ತ್ರಿಲೋಕವನ್ನೆಲ್ಲಾ ಅಳೆದ ನಿನ್ನ ದಿವ್ಯ ಪಾದಂಗಳಿಗೆ ಮಂಗಳ ಉಂಟಾಗಲಿ. ವಾನರ ಸೇನಾಸಮೇತನಾಗಿ ಹೋಗಿ ಪ್ರಸಿದ್ಧವಾದ ಲಂಕಾರಾಜ್ಯಾಧಿಪತಿಯಾದ ದುಷ್ಟರಾವಣನನ್ನು ನಿರಸನಮಾಡಿದ ನಿನ್ನ ಭುಜಬಲಪರಾಕ್ರಮಕ್ಕೂ ಮಂಗಳಉಂಟಾಗಲಿ; ರೂಪುಗೆಟ್ಟು ನಾಶವಾಗುವಂತೆ ಶಕಟಾಸುರನನ್ನು ಒದ್ದುಕೊಂದ ನಿನ್ನ ಯಶಸ್ಸಿಗೂ ಮಂಗಳಾಶಾಸನ; ವತ್ಸರೂಪವಾಗಿ ಬಂದ ಅಸುರನನ್ನು ಕವಣೇಕಲ್ಲಾಗಿ ಮೇಲಕ್ಕೆ ಎಸೆದುಕೊಂದ ನಿನ್ನ ತಿರುವಡಿಗಳಿಗೂ ಮಂಗಳ ಉಂಟಾಗಲಿ, ಗೋವರ್ಧನ ಪರ್ವತವನ್ನು ಛತ್ರಿಯಾಗಿ ಎತ್ತಿ ಗೋವುಗಳನ್ನು ರಕ್ಷಿಸಿದ ನಿನ್ನ ಕರುಣಾಗುಣಾಬ್ಧಿಗೂ ಮಂಗಳ ಉಂಟಾಗಲಿ; ಶತ್ರುಗಳನ್ನೆಲ್ಲಾ ಜಯಿಸಿ ನಿರಸನಮಾಡತಕ್ಕ ನಿನ್ನ ಹಸ್ತದಲ್ಲಿ ಕಂಗೊಳಿಸುವ ಕುಂತಾಯುಧಕ್ಕೂ ಮಂಗಳ ಉಂಟಾಗಲಿ. ಈಪ್ರಕಾರವಾಗಿ ಅದ್ಭುತವಾದ ನಿನ್ನ ವೀರಚರಿತ್ರವನ್ನು ಸ್ತುತಿಸಿ ನಮ್ಮ ಪುರುಷಾರ್ಥವನ್ನು ಪಡೆಯುವುದಕ್ಕಾಗಿ ಈ ದಿನ ಬಂದಿದ್ದೇವೆ. ದಾಸಭೂತರಾದ ನಮ್ಮಮೇಲೆ ಕೃಪೆಮಾಡಿ, ನಮ್ಮ ಅದ್ವಿತೀಯವಾದ ಈ ವ್ರತವನ್ನು ನೆರವೇರಿಸು.

ಸ್ವಾಪದೇಶಾರ್ಥ--ರಹಸ್ಯಾರ್ಥ.

ಭಗವದ್ಭಕ್ತರಾದ ಚೇತನರು ಅಪೇಕ್ಷಿಸಿದ ಪ್ರಕಾರ, ಆಶ್ರಿತ ಸುಲಭನಾದ ಶ್ರೀಕೃಷ್ಣನು ಶಯನ ಗೃಹದಿಂದ ದ್ವಯಾಸ್ಥಾನಮಂಟಪಕ್ಕೆ ವಿಜಯಂಗೆಯ್ದು ಒಡ್ಡೋಲಗವನ್ನು ಕೊಡಲು, ಸ್ವಾಮಿಯ ದಿವ್ಯಮಂಗಳ ವಿಗ್ರಹದ ಸೌಂದರ್ಯಾತಿಶಯವನ್ನು ಕಂಡು ಆನಂದದಲ್ಲಿ ಮುಳುಗಿ ಪರವಶರಾಗಿ ತಾವು ಬಂದ ಉದ್ದೇಶ್ಯವನ್ನೇ ಮರೆತುಬಿಟ್ಟು ಮಂಗಳಾಶಾಸನವನ್ನು ಮಾಡುವರು. ಅದೆಂತೆನೆ—ಅಹಂಕಾರ ಮಮಕಾರಗಳೆಂಬ ಮಹಾಸಮುದ್ರದಲ್ಲಿ ಮುಳುಗಿದ್ದ ಈ ಲೋಕಂಗಳನ್ನು ನೀನು ತ್ರಿವಿಕ್ರಮನಾಗಿ ಅವತರಿಸಿ ನಿನ್ನ ದಿವ್ಯ ಪಾದಂಗಳಿಂದ ಅಳೆದು ನಿನ್ನ ಸ್ವಾಮಿತ್ವವನ್ನು ಸ್ಥಾಪಿಸಿಕೊಂಡ ಜಗದೀಶನೇ, ಅಂಥಾ ನಿನ್ನ ತಿರುವಡಿಗಳಿಗೆ ಮಂಗಳ ಉಂಟಾಗಲಿ; ಅಹಂಕಾರ ಮಮಕಾರಗಳಿಗೆ ತೌರುಮನೆಯಾದ ಪ್ರಕೃತಿಯನ್ನೂ ತತ್ಸಂಭವಗಳಾದ ಸತ್ವ, ರಜಸ್ತಮೋಗುಣಗಳೆಂಬ ತ್ರಿಗುಣಂಗಳನ್ನೂ ನಿರಸನಮಾಡಿದ ಸ್ವಾಮಿಯೇ, ನಿನ್ನ ಅಪಾರಸಾಮರ್ಥ್ಯಕ್ಕೆ ಮಂಗಳ ಉಂಟಾಗಬೇಕು ; ಚಕ್ರದ ಹಾಗೆ ಎಡೆಬಿಡದೆ ಸುತ್ತಿಕೊಂಡುಬರುವ ಕಾಮಕ್ರೋಧಂಗಳನ್ನು ಹೋಗಲಾಡಿಸಿದ ವಾಸುದೇವನೇ, ನಿನ್ನ ಅಪರಿಮಿತವಾದ ಯಶಸ್ಸಿಗೆ ಮಂಗಳ ಉಂಟಾಗಲಿ ; ದೇಹವಂತರಾದವರಿಗೆ ತನ್ನಲ್ಲಿ ವಿಶೇಷವಾದ ಅಭಿರುಚಿಯನ್ನುಂಟುಮಾಡುವ ಲೋಭವನ್ನು ನಿರ್ಮೂಲವಾಗಿ ನಾಶಮಾಡಿದ ಗೋವಿಂದನೇ, ನಿನ್ನ ದಿವ್ಯ ಪಾದಾರವಿಂದಗಳಿಗೆ ಮಂಗಳ ಉಂಟಾಗಲಿ ; ಆಶ್ರಿತಜನರಕ್ಷಕನಾದ ಪರಾತ್ಪರನೇ, ನಿನ್ನ ಶೀಲಸ್ವಭಾವಕ್ಕೆ ಮಂಗಳ ಉಂಟಾಗಲಿ ; ನಿನ್ನ ಭಕ್ತಜನಗಳಿಗೆ ಪ್ರತಿಕೂಲವಾಗಿದ್ದ ಸಮಸ್ತ ವಿರೋಧಿಗಳನ್ನು ನಿರಸನಮಾಡುವ ನಿನ್ನ ಶ್ರೀಚಕ್ರಾಯುಧಕ್ಕೆ ಮಂಗಳ ಉಂಟಾಗಲಿ; ಹೀಗೆ ನಿನ್ನನ್ನು ಕೊಂಡಾಡುವುದೇ ನಮ್ಮ ಯಾತ್ರೆಯಾಗಿಮಾಡಿಕೊಂಡು, ನಿನ್ನ ವೀರಚರಿತವನ್ನು ಸ್ತುತಿಸಿ, ನಮ್ಮ ಪುರುಷಾರ್ಥವನ್ನು ಅಪೇಕ್ಷೆಮಾಡಿಕೊಳ್ಳುವುದಕ್ಕಾಗಿ ಸತ್ವೋದ್ರೇಕವಾದ ಈ ಕಾಲದಲ್ಲಿ ನಿನ್ನನ್ನೇ ನಿರೀಕ್ಷಿಸಿಕೊಂಡು ಇಲ್ಲಿಗೆ ಬಂದೆವು. ನೀನು ನಮ್ಮ ಇಷ್ಟಾರ್ಥವನ್ನು ಕೃಪೆಮಾಡಿದರೆ, ನಮ್ಮ ಭಗವತ್ಕೈಂಕರ್ಯರೂಪವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

---

24. In conformity with the wishes and the request of His devotees, the Lord Srikrishna, always accessible and ready to comply with their wishes, proceeded from His bed-chamber to the Durbar-hall, consecrated to *Dwaya* (*the two-fold mantra*) to give audience to His devotees, when behold! overwhelmed with admiration at the sight of His Divine August Appearance, and being immersed in rapturous joy, they quite forgot the original object of their mission, and began to sing hymns of *benediction* as follows—" May Thy Golden Feet ever prosper, O Lord, the Creator of the universe—the Feet that measured in times of yore, in thy incarnation as *Trivikrama*, the three worlds plunged in the ocean of Ahankâra and Mamakâra (self-love and vanity,) and established Thy Supremacy over all! O Supreme Being! may Thy matchless infinite Valour eternally prosper—the valour that subdued Prakriti (Mâya),the fountain of self-love and vanity, as well as her offspring—the three principles—Satva, Rajas and Tamas. O Vâsudêva! may Thy Unlimited Fame eternally prosper—the fame resulting from the removal of the evil effects on us, Thy devotees, of the all-engrossing passions—desire, anger, &c. O Govinda! may Thy Divine Feet prosper—the Feet that uprooted from the minds of Thy devotees covetousness that engenders amongst all human beings an undue and mistaken attachment to itself. O Lord of lords—the Highest of the highest, The Saviour of Thy refugees! may Thy Goodness, and other Excellence ever prosper! and lastly, may Thy discus ever prosper which secures to thy devotees freedom from the dire effects of all obstacles and adversities! Thus have we approached Thy Presence in this auspicious hour to humbly represent our wants, extolling Thy Heroic Glory, and making it our sole profession to sing Thy hymns in Thy praise, in the full belief that Thou wouldst graciously be pleased to accede to our wishes; and if we be so far favonred with Thy Grace, we shall be in a fair way to bring the special vow to a successful fruition.

ಒರುತ್ತಿಮಕನಾಯ್ಪ್ಪಿಱನ್ದೋರಿರವಿ |
ಲೊರುತ್ತಿಮಕನಾಯೊಳಿತ್ತುವಳರ ‖
ತ್ತರಿಕ್ಕಿಲಾನಾಕಿತ್ತಾನ್ತೀಙ್ಗುನಿನೈನ್ದ |
ಕರುತ್ತೈಪ್ಪಿೞೈಪ್ಪಿತ್ತುಕ್ಕಞ್ಜನ್ವಯಿಱ್ಱಿ ‖
ನೆರುಪ್ಪೆನ್ನನಿನ್ಱನೆಡುಮಾಲೇಯುನ್ನೈ |
ಯರುತ್ತಿತ್ತುವನ್ದೋಂಪಱೈತರುದಿಯಾಕಿ ‖
ಲ್ತಿರುತ್ತಕ್ಕಶೆಲ್ವಮುಂಶೇವಕಮುಮಿಯಾಂಪಾಡಿ |
ವರುತ್ತಮುಂತೀರ್ನ್ದುಮಕಿೞ್ನ್ದೇಲೋರೆಂಪಾವಾಯ್ ‖ ... ‖೨೫‖

ಪ್ರತಿಪದಾರ್ಥ.

ಒರುತ್ತಿಮಕನಾಯ್ ಪಿಱನ್ದು—ಒಬ್ಬ ತಾಯಿಗೆ (ದೇವಕೀದೇವಿಗೆ) ಪುತ್ರನಾಗಿ ಅವತರಿಸಿ
ಓರ್ ಇರವಿಲ್—ಅಸದೃಶವಾದ ಆರಾತ್ರಿಯಲ್ಲಿ ತಾನೇ
ಒರುತ್ತಿಮಕನಾಯ್—ಮತ್ತೆ ಬೇಱೆಯಾದ ಯಶೋದಾದೇವಿಗೆ ಪುತ್ರನಾಗಿ
ಒಳಿತ್ತುವಳರ—ಗೂಢವಾಗಿ ಬೆಳೆಯುತ್ತಿರಲು
ತರಿಕ್ಕಿಲಾನಾಕಿ—ಅಸಹಿಷ್ಣುವಾಗಿ
ತಾನ್ತೀಙ್ಗುನಿನೈನ್ದ—ತಾನು ಕೇಡನ್ನು ಬಯಸಿದ
ಕರುತ್ತೈಪ್ಪಿೞೈಪ್ಪಿತ್ತು—ಮನೋಭಾವವನ್ನು ವ್ಯರ್ಥಪಡಿಸಿ
ಕಂಜನ್ವಯಿಱ್ಱಿಲ್—ಕಂಸಾಸುರನ ಉದರದಲ್ಲಿ
ನೆರುಪ್ಪೆನ್ನನಿನ್ಱ—ಬೆಂಕಿಯಂತೆ ಉರಿಯುವಹಾಗೆ ಭಯೋತ್ಪಾತಕನಾಗಿ ನಿಂತ
ನೆಡುಮಾಲೇ—ಉದಾರಶೀಲನಾದ ಶ್ರೀಕೃಷ್ಣನೇ
ಉನ್ನೈ ಅರುತ್ತಿತ್ತು—ನಿನ್ನನ್ನು ಪ್ರಾರ್ಥಿಸಿ
ವನ್ದೋಂ—ನಿನ್ನ ಸನ್ನಿಧಿಗೆ ಬಂದಿದ್ದೇವೆ.
ಪಱೈತರುದಿಯಾಕಿಲ್—ಇಷ್ಟಾರ್ಥಸಿದ್ಧಿರೂಪವಾದ ಪಟಹವನ್ನು ಕೊಡುವದಾದರೆ
ತಿರುತ್ತಕ್ಕಶೆಲ್ವಮುಂ—ಲಕ್ಷ್ಮೀದೇವಿಗೆ ಯೋಗ್ಯವಾದ ಸಂಪತ್ತನ್ನೂ
ಶೇವಕಮುಂಯಾಂಪಾಡಿ—ಮಹಾವೀರ್ಯವನ್ನೂ ನಾವು ಕೊಂಡಾಡಿ
ವರುತ್ತಮುಂತೀರ್ನ್ದು—ನಿನ್ನ ವಿಶ್ಲೇಷದಿಂದುಂಟಾದ ವ್ಯಸನವು ನೀಗಿ
ಮಕಿೞ್ನ್ದು—ನಾವು ಸಂತುಷ್ಟರಾಗಲು
ಓರ್—ಅದ್ವಿತೀಯವಾದ
ಎಂಪಾವೈ—ನಮ್ಮ ಈ ವ್ರತವು
ಆಯ್—ಶುಭವಾಗಿ ನೆಱವೇಱುವುದು.

ತಾತ್ಪರ್ಯ.

ಎಲೈ ಸ್ವಾಮಿಯೇ, ಒಬ್ಬ ತಾಯಿಯಾದ ದೇವಕೀದೇವಿಗೆ ಪುತ್ರನಾಗಿ ಅವತರಿಸಿ, ಅಸದೃಶವಾದ ಆ ರಾತ್ರಿಯಲ್ಲಿ ತಾನೇ ಮತ್ತೆ ಬೇಱೆ ತಾಯಿಯಾದ ಯಶೋದಾದೇವಿಗೆ ಪುತ್ರನಾಗಿ ಭಾವಿಸಲ್ಪಟ್ಟು ಒಬ್ಬರಿಗೂ ತಿಳಿಯದಂತೆ ಗೋಕುಲದಲ್ಲಿ ಬೆಳೆಯುತ್ತಿರಲು, ಅಸಹಿಷ್ಣುವಾಗಿ ತಾನು ಕೇಡನ್ನು ಬಯಸಿದ ಕಂಸಾಸುರನ ದುಷ್ಟ ಮನೋಭಾವವನ್ನು ವ್ಯರ್ಥಪಡಿಸಿ, ಅವನ ಹೊಟ್ಟೆಯಲ್ಲಿ ಬೆಂಕಿಬಿದ್ದು ಉರಿಯುವಹಾಗೆ ಭಯೋತ್ಪಾದಕನಾಗಿ ನಿಂತ ಉದಾರಶೀಲನಾದ ಶ್ರೀಕೃಷ್ಣನೇ, ನಿನ್ನನ್ನು ಭಕ್ತಿ ಪುರಸ್ಸರವಾಗಿ ಪ್ರಾರ್ಥಿಸಿ ನಿನ್ನ ಸನ್ನಿಧಿಗೆ ಬಂದಿದ್ದೇವೆ. ನಮ್ಮ ಇಷ್ಟಾರ್ಥಸಿದ್ಧಿರೂಪವಾದ ಪಟಹವನ್ನು ನೀನು ಅನುಗ್ರಹಿಸುವುದಾದರೆ, ಆ ಶ್ರೀಮಹಾಲಕ್ಷ್ಮೀದೇವಿಗೆ ಯೋಗ್ಯವಾದ ನಿನ್ನ ದಿವ್ಯ ಸಂಪತ್ತನ್ನೂ ಅಸದೃಶವಾದ ಮಹಾವೀರ್ಯವನ್ನೂ ನಾವು ಕೊಂಡಾಡಿ, ನಿನ್ನ ವಿಶ್ಲೇಷದಿಂದುಂಟಾದ ವ್ಯಸನವನ್ನು ನಿವಾರಣೆಮಾಡಿಕೊಂಡು ನಾವು ಸಂತುಷ್ಟರಾಗುವೆವು. ಹಾಗೆ ನೀನು ಕೃಪೆಮಾಡಿದಲ್ಲಿ, ನಮ್ಮ ಅದ್ವಿತೀಯವಾದ ಈ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆಱವೇಱುವುದು.

### ಸ್ವಾಪದೇಶಾರ್ಥ—ರಹಸ್ಯಾರ್ಥ.

ಎಲೈ ಸ್ವಾಮಿಯೇ, ಸರ್ವೇಶ್ವರನಾದ ನೀನು ಸ್ಪಷ್ಟವಾಗಿ ಶ್ರೀ ಅಷ್ಟಾಕ್ಷರಿಯಾದ ತಿರುಮಂತ್ರದಲ್ಲಿ ಪ್ರತಿಪಾದ್ಯನಾಗಿ ಗುಣವಿಗ್ರಹವಿಭೂತಿವಿಶಿಷ್ಟನಾಗಿ ಪ್ರಕಾಶಿಸುತ್ತಿರಲು, ವಾಸುದೇವ ದ್ವಾದಶಾಕ್ಷರಾದಿಮಂತ್ರಗಳಲ್ಲಿ ನೀನು ವಿಸ್ಪಷ್ಟವಾಗಿ ಬೆಳಗುತ್ತೀಯಷ್ಟೆ. ನಿನಗೆ ಶೇಷಭೂತರಾದ ಚೇತನರು ಯಾವಾಗಲೂ ಮಂಗಳಾಶಾಸನವನ್ನು ಮಾಡಲಾಗಿ, ಇದರಿಂದ ಪ್ರತಿಪಾದ್ಯವಾದ ಈಶ್ವರ ಸತ್ತೆಯನ್ನು ಸಹಿಸದ ತಮಃಪ್ರಚುರವಾದ ಅಹಂಕಾರವು ದ್ವೇಷಿಸಲು, ಇದನ್ನು ಪೂರ್ಣವಾಗಿ ನಿವಾರಣೆಮಾಡಿ ನಾಶಮಾಡಿದ ಪರಮೋಪಕಾರಕನೇ, ನಿನ್ನಲ್ಲಿ ಪುರುಷಾರ್ಥವನ್ನು ಅಪೇಕ್ಷಿಸಿ ಬಂದೆವು; ಅದನ್ನು ನೀನು ಕೃಪೆಮಾಡುವದಾದರೆ, ಸಾಕ್ಷಾತ್ ಶ್ರೀಮಹಾಲಕ್ಷ್ಮಿಗೆ ಯೋಗ್ಯವಾದ ಸ್ವರೂಪರೂಪ ಗುಣವಿಗ್ರಹ ವಿಭೂತಿವಿಶಿಷ್ಟನಾಗಿರುವ ನಿನ್ನ ಸಂಪತ್ತನ್ನೂ ವೀರಚರಿತವನ್ನೂ ಕೊಂಡಾಡಿ ನಿನ್ನ ವಿಶ್ಲೇಷದಿಂದುಂಟಾಗಿದ್ದ ವ್ಯಸನವೆಲ್ಲಾ ನಿಶ್ಶೇಷವಾಗಿ ನೀಗುವಂತೆ ನಾವು ಆನಂದಿಸಲಾಗಿ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪ ವ್ರತವು ಶುಭವಾಗಿಯೂ ಸಾಂಗವಾಗಿಯೂ ನೆರವೇರುವುದು.

---

25. O Lord of the Universe! While Thou art explicitly demonstrated in the eight-syllabled sacred *Tirumantra,* and therein shinest resplendent in the fulness of Thy Glory and other Excellences, Thou art not so distinctly demonstrable in the twelve-syllabled *Vâsudéva Mantra*, and such others. O Thou Great Benefactor! Thou hast entirely destroyed the gloomy *Ahankâra* (egoity), the hater of Thy very Existence which is being extolled with great halleluiahs by Thy beloved devotees! We have approached Thee in the hope of achieving our object at Thy hands. If Thou be graciously pleased to comply with our humble request, we shall, with all our heart, proclaim Thy Glorious Valour as well as Thy Immeasurable Opulence, suitable unto the dignity and exalted position of Thy Noble Consort Lakshmi, and befitting Thy August Appearance, Splendour and other Excellences, and enjoy Thy Uninterrupted Presence so as to completely get rid of all our sufferings caused by long separation, and then we shall be in a fair way to bring the special vow to a successful fruition—the vow consisting in holding communion with the Lord, and in the uninterrupted enjoyment of His Glory, Goodness, Mercy, and other Excellences.

ಮಾಲೇಮಣಿವಣ್ಣಾಮಾರ್ಕಟಿನೀರಾಡುವಾನ್ |
ಮೇಲೈಯಾರ್ಶೆಯ್ವನಕಳ್ವೇಣ್ಡುವನಕೇಟ್ಟಿಯೇಲ್ ||
ಞಾಲತ್ತೈಯೆಲ್ಲಾನಡುಙ್ಗಮುರಲ್ವನ|
ಪಾಲನ್ನವಣ್ಣತ್ತುನ್ಪಾಞ್ಚಜನ್ನಿಯಮೇ ||
ಪೋಲ್ವನಶಙ್ಗಙ್ಗಳ್ಪೋಯ್ಪ್ಪಾಡುಡೈಯನವೇ |
ಶಾಲಪ್ಪೆರುಂಪಱೈಯೇಪಲ್ಲಾಣ್ಡಿಶೈಪ್ಪಾರೇ ||
ಕೋಲವಿಳಕ್ಕೇಕೊಡಿಯೇವಿತಾನಮೇ |
ಆಲಿನಿಲೈಯಾಯರುಳೇಲೋರೆಂಪಾವಾಯ್ || .. ||೨೬||

## ಪ್ರತಿಪದಾರ್ಥ.

ಮಾಲೇ–ಆಶ್ರಿತರಿಗೆಲ್ಲಾ ವ್ಯಾಮೋಹಕರನೇ
ಮಣಿವಣ್ಣಾ–ನೀಲರತ್ನಛಾಯೆಯುಳ್ಳ ಶ್ರೀಕೃಷ್ಣನೇ
ಮಾರ್ಕಟಿನೀರಾಡುವಾನ್–ಮಾರ್ಗಶೀರ್ಷಾಭಿಷೇಕ ವನ್ನು ಮಾಡಲು
ಮೇಲೈಯಾರ್–ಹಿರಿಯರು
ಶೆಯ್ವನಕಳ್–ಅನುಷ್ಠಿಸಿದಂಥಾ
ವೇಣ್ಡುವನ–(ಆದುದರಿಂದಲೇ) ನಮಗೆ ಬೇಕಾದವುಗ [ಳನ್ನು
ಕೇಟ್ಟಿಯೇಲ್–ನೀನು ಕೇಳುವುದಾದರೆ
ಞಾಲತ್ತೈಯೆಲ್ಲಾಂ–ಈ ಭೂಮಂಡಲವೆಲ್ಲವೂ
ನಡುಙ್ಗಮುರಲ್ವನ–ನಡುಗುವಹಾಗೆ ಶಬ್ದಿಸುವ
ಪಾಲನ್ನವಣ್ಣತ್ತು–ಕ್ಷೀರವರ್ಣವುಳ್ಳ
ಉನ್ಪಾಞ್ಚಜನ್ನಿಯಮೇ–ನಿನ್ನ ಅಸದೃಶವಾದ ಪಾಞ್ಚಜನ್ಯವನ್ನು
ಪೋಲ್ವನಶಙ್ಗಙ್ಗಳ್–ಹೋಲುವ ಶಂಖಗಳೂ
ಪೋಯ್ಪಾಡುಡೈಯನವೇ–ಮಹಾವಿಸ್ತಾರವಾದಂಥ
ಶಾಲಪ್ಪೆರುಂಪಱೈಯೇ–ಬಹುದೊಡ್ಡ ಪಟಹಗಳೂ
ಪಲ್ಲಾಣ್ಡಿಶೈಪ್ಪಾರೇ–ಪಲ್ಲಾಣ್ಡು ಸ್ತುತಿಸುವವರೂ
ಕೋಲವಿಳಕ್ಕೇ–ಮಂಗಳ ದೀಪಂಗಳೂ
ಕೊಡಿಯೇ–ಧ್ವಜಂಗಳೂ
ವಿತಾನಮೇ–ಮೇಲು ಕಟ್ಟುಗಳೂ–ಇವುಗಳನ್ನು
ಆಲಿನಿಲೈಯಾಯ್–ವಟಪತ್ರಶಾಯಿಯಾದ ಸ್ವಾಮಿಯೇ
ಅರುಳ್–ನೀನು ಕೃಪೆಮಾಡಲು
ಏಲ್, ಓರ್–ತಕ್ಕ, ಅದ್ವಿತೀಯವಾದ
ಎಂಪಾವೈ–ನಮ್ಮ ಈ ವ್ರತವು
ಆಯ್–ಶುಭವಾಗಿ ನೆರವೇರುವುದು.

## ತಾತ್ಪರ್ಯ.

ಆಶ್ರಿತರಿಗೆಲ್ಲಾ ವ್ಯಾಮೋಹಕರನೇ, ನೀಲರತ್ನಛಾಯನಾದ ಶ್ರೀಕೃಷ್ಣಸ್ವಾಮಿಯೇ, ನಾವೆಲ್ಲಾ ಮಾರ್ಗಶೀರ್ಷಸ್ನಾನವನ್ನು ಮಾಡುವುದಕ್ಕೋಸ್ಕರ ಹಿರಿಯರೆಲ್ಲಾ ಅನುಷ್ಠಿಸಿದಂತಹ ನಮಗೆ ಬೇಕಾದ ಸಾಮಗ್ರಿಗಳನ್ನು ನೀನು ಕೇಳುವುದಾದರೆ ಹೇಳುವೆವು, ಲಾಲಿಸಬೇಕು.–ಈ ಭೂಮಣ್ಡಲವೆಲ್ಲಾ ನಡುಗುವಹಾಗೆ ಶಬ್ದಿಸುವಂಥಾವುಗಳಾಗಿಯೂ ಕ್ಷೀರವರ್ಣವುಳ್ಳವುಗಳಾಗಿಯೂ ನಿನ್ನ ಅಸದೃಶವಾದ ಪಾಞ್ಚಜನ್ಯವನ್ನು ಹೋಲ ತಕ್ಕವುಗಳಾಗಿಯೂ ಇರುವ ಅನೇಕಶಙ್ಖಂಗಳೂ, ಮಹಾವಿಸ್ತಾರವಾಗಿಯೂ ದೊಡ್ಡವುಗಳಾಗಿಯೂ ಉದಾರ ಘೋಷವನ್ನು ಮಾಡುವವುಗಳಾಗಿಯೂ, ಇರುವ ಪಟಹಗಳೂ, ನಿನಗೆ ಮಂಗಳಾಶಾಸನಮಾಡಲು ಪಲ್ಲಾಣ್ಡು ಹಾಡುವವರೂ, ಮಂಗಳದೀಪಂಗಳೂ, ಧ್ವಜಂಗಳೂ ಮೇಲುಕಟ್ಟುಗಳೂ–ಇವುಗಳನ್ನೆಲ್ಲಾ, ವಟಪತ್ರಶಾಯಿಯಾದ ಸ್ವಾಮಿಯೇ, ನೀನು ಕೃಪೆಮಾಡಲು, ನಮ್ಮ ಅದ್ವಿತೀಯವಾದ ಈ ವ್ರತವು ಸಾಂಗವಾಗಿಯೂ ಶುಭವಾಗಿಯೂ ನೆರವೇರುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಆಶ್ರಿತವ್ಯಾಮೋಹವೇ ಸ್ವರೂಪವಾಗಿ ಅತಿಮನೋಹರವಾದ ದಿವ್ಯಮಂಗಳವಿಗ್ರಹವುಳ್ಳ ಸ್ವಾಮಿಯೇ, ಪ್ರಪನ್ನಾಧಿಕಾರಿಗಳಿಗೆ ಅವಶ್ಯಾನುಷ್ಠೇಯವೆಂದು ಹೇಳಲ್ಪಟ್ಟದ್ದಾಗಿಯೂ ಶಿಷ್ಟಾಚಾರಕ್ರಮದಲ್ಲಿ ಬಂದದ್ದಾಗಿಯೂ ಇರುವ ಭಗವತ್ಕೈಂಕರ್ಯರೂಪವಾದ ವ್ರತಕ್ಕೆ ಅವಶ್ಯಕವಾಗಿ ಬೇಕಾದವುಗಳು ಯಾವವೆಂದರೆ, ಅರಿಕೆಮಾಡಿಕೊಳ್ಳುವೆವು ; ಸಾವಧಾನವಾಗಿ ಲಾಲಿಸಬೇಕು.—ಭೂಮಂಡಲದಲ್ಲೆಲ್ಲಾ ಪ್ರಸಿದ್ಧವಾಗಿ ಘೋಷಿಸುವ ಓಂಕಾರಾರ್ಥರೂಪವಾದ ಅನನ್ಯಾರ್ಹಶೇಷತ್ವಜ್ಞಾನವೂ ; ಇಂತಹ ಜ್ಞಾನಕ್ಕೆ ಪ್ರತಿಕೂಲವಾದ ಸ್ವಸ್ವಾತಂತ್ರ್ಯವನ್ನು ನಿವೃತ್ತಿಮಾಡುವಂಥಾ ನಮಶ್ಶಬ್ದಾರ್ಥವಾದ ಪಾರತಂತ್ರ್ಯಜ್ಞಾನವು ; ಸತ್ಸಹವಾಸವೂ ; ಸರ್ವೇಶ್ವರನಾದ ನಿನಗೆ ಅತ್ಯಂತ ಪ್ರೀತಿಕರವಾದ ಭಾಗವತಶೇಷತ್ವಜ್ಞಾನವೂ ; ಉಭಯಶೇಷತ್ವಸ್ವರೂಪವಾದ ಕೈಂಕರ್ಯವೂ ; ಅಂತಹ ಕೈಂಕರ್ಯದಲ್ಲಿ ಭೋಕ್ತೃತ್ವ ನಿವೃತ್ತಿಯೂ—ಇವುಗಳೆಲ್ಲವನ್ನೂ ದಯಪಾಲಿಸಬೇಕು ಮಹಾಪ್ರಳಯಕಾಲದಲ್ಲಿ ಸಮಸ್ತ ಜೀವರಾಶಿಗಳನ್ನೂ ತನ್ನ ಉದರದಲ್ಲಿ ಲೀನವಮಾಡಿಸಿ ವಟಪತ್ರಶಾಯಿಯಾಗಿರುವ ಆಶ್ರಿತರಕ್ಷಕನೇ, ನೀನು ದಯವಿಟ್ಟು ಸಾವಕಾಶಮಾಡದೆ ನಮ್ಮ ಕೋರಿಕೆಯನ್ನು ನೆರವೇರಿಸಿ ಕೊಟ್ಟರೆ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪವ್ರತವು ಸಾಂಗವಾಗಿಯೂ ಶುಭವಾಗಿಯೂ ತೇರ್ಗಡೆಯಾಗುವುದು.

---

26. O Lord Srikrishna! commanding the most pleasant auspicious Divine Appearance, and naturally enamoured of Thy devotees, if Thou be pleased to graciously hear us, we shall, with Thy kind permission, enumerate the requisitions necessary for the successful fruition of our matchless vow, as enjoined to be secured and adopted by Thy special devotees, and as traditionally handed down from generation to generation: these are as follow—(1) The knowledge of the principle that our devotional service is due to no other than the Supreme Being Thyself, essentially inculcated in the sacred '*Omkāra*' the voice of which loudly thunders with due celebrity throughout the world; (2) the knowledge of the idea of dependence on the Lord Himself, distinctly proclaimed by the portion '*Namas*' of the sacred mantra, which knowledge is antagonistic to the mistaken idea of independence; (3) healthy Association with the learned and pious; (4) the knowledge of dutifulness towards Thy devotees, which is most endearing to Thee; (5) spiritual devotional service and unflinching loyalty due to Thee as well as to Thy followers; (6) the removal of all ideas of self-enjoyment derivable from such devotional service. All these Thou shouldst condescend to favour us with. O Lord! the Saviour of all devotees, that dost take rest on the bânyan-leaf a baby, preserving all the creatures within Thy Abdomen at the final deluge of the world! Should Thou kindly fulfil our desires without any delay, we shall be in a fair way to bring the special vow to a successful fruition—the vow consisting in *holding communion* with the Lord and in the uninterrupted enjoyment of His Glory, Mercy, Goodness, and other Excellences.

ಕೂಡಾರೈವೆಲ್ಲುಂಶೀರ್ಗೋವಿಂದಾವುನ್ದನ್ನೈಪ್ |
ಪ್ಪಾಡಿಪ್ಪಱೈಕೊಣ್ಡುಯಾಂಪೆಱುಶಮ್ಮಾನ ‖
ನಾಡುಪುಕೞುಂಪರಿಶಿನಾನನ್ಱಾಕ |
ಚೂಡಕಮೇತೋಳ್ವಳೈಯೇತೋಡೇಶೆವಿಪ್ಪೂವೇ ‖
ಪಾಡಕಮೇಯೆನ್ಱನೈಯಪಲ್ಕಲನುಮಿಯಾಮಣಿವೋಂ |
ಆಡೈಯುಡುಪ್ಪೋಮದನ್ಪಿನ್ನೇಪಾಲ್ಶೋಱು ‖
ಮೂಡನೆಯ್ಪೆಯ್ದುಮುೞಙ್ಗೈವೞಿವಾರ |
ಕೂಡಿಯಿರುನ್ದುಕುಳಿರ್ನ್ದೇಲೋರೆಂಪಾವಾಯ್ ‖ ... ‖೨೭‖

ಪ್ರತಿಪದಾರ್ಥ.

ಕೂಡಾರೈ—ತನ್ನನ್ನು ಆಶ್ರಯಿಸದವರನ್ನು
ವೆಲ್ಲುಂಶೀರ್—ಜಯಿಸತಕ್ಕ ಗುಣವುಳ್ಳ
ಗೋವಿನ್ದಾ—ಗೋವಿಂದನೇ
ಉನ್ ತನ್ನೈ ಪಾಡಿ—ನಿನ್ನನ್ನು ಕೊಣ್ಡಾಡಿ
ಪಱೈಕೊಣ್ಡು—ಪಟಹ ಮುಂತಾದ್ದನ್ನು ಸ್ವೀಕರಿಸಿದ ಅನಂತರ
ಯಾಂ ಪೆಱು ಶಮ್ಮಾನಂ—ನಾವು ಹೊಂದತಕ್ಕ ಬಹುಮಾನವು
ನಾಡುಪುಕೞುಂ—ಲೋಕದವರೆಲ್ಲಾ ಹೊಗಳುವ ಹಾಗೆ
ಪರಿಶಿನಾಲ್ ನನ್ಱಾಕ—ಗುಣಾತಿಶಯದಲ್ಲಿ ಶ್ರೇಷ್ಠವಾದ
ಶೂಡಕಮೇ—ಕೈಯಲ್ಲಿ ಧರಿಸತಕ್ಕ ಕಙ್ಕಣವೂ
ತೋಳ್ವಳೈಯೇ—ಭುಜಕೀರ್ತಿಯೂ
ತೋಡೇ—ಕಿವಿಯಲ್ಲಿ ಧರಿಸತಕ್ಕ ಓಲೆಯೂ
ಶೆವಿಪ್ಪೂವೇ—ಕರ್ಣಪೂರವೆಂಬ ಆಭರಣವೂ
ಪಾಡಕಮೇ—ಕಾಲ್ಗಡಗವೂ
ಎನ್ಱನೈಯ ಪಲ್ಕಲನುಂ—ಎಂಬ ನಾನಾವಿಧವಾದ ಆಭರಣಗಳೂ
ಯಾಂ ಅಣಿವೋಂ—ನಾವು ಧರಿಸಿಕೊಳ್ಳುವೆವು
ಆಡೈಯುಡುಪ್ಪೋಂ—ನಿನ್ನ ಪ್ರಸಾದವಾದ ವಸ್ತ್ರಂಗಳನ್ನು ಧರಿಸುವೆವು
ಅದನ್ಪಿನ್ನೇ—ಅದಾದಮೇಲೆ
ಪಾಲ್ಶೋಱು—ಕ್ಷೀರಾನ್ನವು
ಮೂಡನೆಯ್ಪೆಯ್ದು—ಮುಳುಗಿಹೋಗುವಹಾಗೆ ಘೃತವನ್ನು ಸೇರಿಸಿ
ಮುೞಙ್ಗೈವೞಿವಾರ—ಮೋಕ್ಷಮಾರ್ಗವಾಗಿ ಹರಿದುಹೋಗುವಂತೆ
ಕೂಡಿ ಇರುನ್ದು—ನೀನೂನಾವೂಸೇರಿ ಭುಜಿಸಬೇಕು
ಕುಳಿರ್ನ್ದು—ನಾವೆಲ್ಲಾ ಸುಖವಾಗಿದ್ದು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಶುಭವಾಗಿ ತೀರ್ಗಡೆಯಾಗುವುದು.

ತಾತ್ಪರ್ಯ.

ತನ್ನನ್ನು ಆಶ್ರಯಿಸಿ ಉಜ್ಜೀವಿಸಲೆಳಸದವರನ್ನು ಸ್ವಾಧೀನಪಡಿಸತಕ್ಕ ಗುಣಂಗಳುಳ್ಳ ಗೋವಿನ್ದನೇ! ನಿನ್ನನ್ನು ಕೊಣ್ಡಾಡಿ ನಿನ್ನ ಕೃಪೆಯಿಂದ ಪಟಹ ಮುಂತಾದ್ದನ್ನು ಸ್ವೀಕರಿಸಿ, ಅನಂತರ ನಾವು ಹೊಂದತಕ್ಕ ಬಹುಮಾನವೇನೆಂದರೆ, ಲಾಲಿಸಿ ಕೇಳು, ಹೇಳುವೆವು. ಲೋಕದವರೆಲ್ಲಾ ಕೊಣ್ಡಾಡುವಹಾಗೆ ಗುಣಾತಿಶಯವುಳ್ಳದ್ದಾಗಿರುವ ಕಙ್ಕಣಾಭರಣ, ಭುಜವಲಯ, ಓಲೆ, ಕರ್ಣಪೂರ, ಕಾಲ್ಗಡಗ ಮುಂತಾದ ನಾನಾವಿಧವಾದ ಆಭರಣಗಳನ್ನು ನೀನೂ ನೀಳಾದೇವಿಯೂ ಅನುಗ್ರಹಿಸಿ ಕೊಟ್ಟಲ್ಲಿ, ನಾವು ಆನಂದದಿಂದ ಧರಿಸಿಕೊಳ್ಳುವೆವು. ನಿಮ್ಮ ಪ್ರಸಾದವಾದ ವಸ್ತ್ರಂಗಳನ್ನೂ ಧರಿಸುವೆವು; ಅನಂತರ ಕ್ಷೀರಾನ್ನವು ಸುವಾಸನೆಯುಳ್ಳ ಘೃತದಿಂದ ವಿಶೇಷವಾಗಿ ಮಿಶ್ರಮಾಡಲ್ಪಟ್ಟು, ಮೋಕ್ಷಮಾರ್ಗವಾಗಿ ಆ ತುಪ್ಪವು ಹರಿದುಹೋಗುವಂತೆ ನಾವು ನಿನ್ನೊಡನೆ ಸೇರಿ ಸುಖವಾಗಿ ಭುಜಿಸಬೇಕು. ಆಗ ನಮ್ಮ ಅದ್ವಿತೀಯವಾದ ಈ ವ್ರತವು ಸಫಲವಾಗಿ ತೇರ್ಗಡೆಯಾಗುವುದು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಚೇತನರಿಗೆ ಕರಣಕಳೇಬರಂಗಳನ್ನೂ ಅನುಗ್ರಹಿಸಿ ಶಾಸ್ತ್ರಪ್ರದಾನವನ್ನು ಮಾಡಿದರೂ "ನಾವು ನಿನಗೆ ಶೇಷಭೂತರಲ್ಲ; ಆದಕಾರಣ ನಾವು ನಿನ್ನ ಕೈಙ್ಕರ್ಯದಲ್ಲಿ ಪ್ರವರ್ತಿಸಿ

ವುದಿಲ್ಲ" ಎಂದು ಮುಷ್ಕರಮಾಡುವವರನ್ನೂ ಕೂಡ ತನ್ನ ಸೌಶೀಲ್ಯ ಶೌರ್ಯಾದಿಗುಣಂಗ
ಳಿಂದ ಸನ್ಮಾರ್ಗಕ್ಕೆ ತಿರುಗಿಸಿ ಜಯಶೀಲನಾಗತಕ್ಕ ಸರ್ವಸುಲಭನಾದ ಶ್ರೀಕೃಷ್ಣನೇ!
ಸರ್ವಸ್ವಾತ್ಮಪರನಾದ ನಿನ್ನನ್ನು ಸ್ವಭಾವಸಿದ್ಧವಾದ ಪ್ರೀತಿಯಿಂದ ಸ್ತುತಿಸಿ, ನಿನ್ನ ದಿವ್ಯ
ನಾಮಸಂಕೀರ್ತನವನ್ನು ಮಾಡಿ, ಪುರುಷಾರ್ಥಂಗಳನ್ನು ಹೊಂದಿದ ತರುವಾಯ ನಿನ್ನಿಂದ
ನಾವು ಹೊಂದತಕ್ಕ ಸನ್ಮಾನಗಳು ಯಾವವೆಂದರೆ, ಸಾವಧಾನವಾಗಿ ಲಾಲಿಸಬೇಕು.—
ವಿಷ್ಣುಪಾದಾಕೃತಿಯೆಂದು ಭಾವಿಸಲ್ಪಡುವ ಊರ್ಧ್ವಪುಂಡ್ರವನ್ನೂ, ನಿನ್ನ ಅನನ್ಯಾರ್ಹ
ಶೇಷರಾದ ದಾಸಭೂತರೆಂದು ಸೂಚಿಸುವ ಶಂಖಚಕ್ರಾಂಕನವನ್ನೂ, ಆತ್ಮಸ್ವರೂಪ
ಯಾಥಾತ್ಮ್ಯಜ್ಞಾನವನ್ನು ಕೊಡುವ ತಿರುಮನ್ತ್ರವನ್ನೂ, ಭಕ್ತಿಪ್ರದಾತೃವಾದ ದ್ವಯ
ವೆಂಬ ಮಂತ್ರವನ್ನೂ, ಉಪಾಯಾನ್ತರ ನಿವೃತ್ತಿರೂಪವಾದ ವೈರಾಗ್ಯವನ್ನು ಉಂಟು
ಮಾಡುವ ಚರಮಶ್ಲೋಕ ಮಂತ್ರವನ್ನೂ—ಹೀಗೆ ಸ್ವರೂಪಜ್ಞರಾದ ಮುಮುಕ್ಷುಗಳಿಗೆ
ಬೇಕಾಗತಕ್ಕ ಇವುಗಳನ್ನೆಲ್ಲಾ ನೀನು ನಮಗೆ ಯಥಾವತ್ತಾಗಿ ದಯಾಪಾಲಿಸಿ ಕಾಪಾ
ಡಬೇಕು. ಇದಲ್ಲದೆ ಹೀಗೆ ಜ್ಞಾನಭಕ್ತಿವೈರಾಗ್ಯಾತಿಶಯದಿಂದ ಶೇಷತ್ವಜ್ಞಾನವು ತಲೆಯೆತ್ತಿ
ತದನಂತರ ನಾವು ನಿನ್ನಲ್ಲಿ ಮಾಡುವ ಕೈಂಕರ್ಯವನ್ನೂ, ನಮ್ಮ ಪಾರತಂತ್ರ್ಯಜ್ಞಾನಸೂಚಕ
ವಾದ ಆನಂದಪ್ರವಾಹವು ಉಕ್ಕಿಬರುವಂತೆ, ನಡಿಸಿಕೊಂಡುಬರಬೇಕು; ಭೋಕ್ತೃವಾದ
ನಿನ್ನೊಡನೆ ಭೋಗ್ಯರಾದ ನಾವು ಈಗ ತತ್ವಜ್ಞಾನಪುರಸ್ಸರವಾಗಿ ಸಂಬಂಧಿಸಿಕೊಂಡಿರು
ವುದರಿಂದ, ವಿಶ್ಲೇಷ ವ್ಯಸನವೆಲ್ಲಾ ನಿನ್ನ ಕೃಪೆಯಿಂದ ಈಗ ತೀರಿಹೋದವು; ಈ ದಿವಸ
ವಲ್ಲವೇ ನಿನ್ನಿಂದ ಹೊಂದತಕ್ಕ ಪುರುಷಾರ್ಥಂಗಳನ್ನೂ ಮೇಲೆಹೇಳಿದ ಸನ್ಮಾನಂಗಳನ್ನೂ
ನಾವು ಹೊಂದಿ, ನಮ್ಮ ಅದ್ವಿತೀಯವಾದ ಭಗವತ್ಕೈಂಕರ್ಯರೂಪವ್ರತವು ಸಾಂಗವಾ
ಗಿಯೂ ಶುಭವಾಗಿಯೂ ನೆರವೇರಿತು.

---

27. O Lord Srikrishna! accessible to all, Who hast the special merit of bringing round to a righteous course, by Thy Goodness, Heroism and other Excellences, even the most obdurate of human creatures that persist in pursuing a wrong course, blabbering thus—" We owe no allegiance to Thee, hence we are not bound to offer any devotional service to Thee," though Thou hast been all along kind to them, hast given them bodies and organs to work with, and hast even blessed them with sciences and revelations to lead them on to Truth. We shall, with Thy Gracious Permission, sing Thy Glory with our natural devotion and piety, and heartily recite Thy *divine names* as in duty bound; and soon after the fulfilment of our objects, what we are to be blessed with as presents by Thee in connection with the completion of our vow, we shall enumerate, if Thou be pleased to hear. These are as follow—(1) the symbol of *oordhvapundra* to adorn our forehead as indicating the mark of Thy Divine Feet; (2) the symbol of the discus and conch-shell to proclaim to the world; that we are loyal devotees to Thee, and to no other; (3) the award of sacred *Tirumantra*, that bestows on us the right knowledge regarding the real nature of our soul *in relation to* Thee; (4) the sacred *Dvaya*, the giver of wisdom and piety; (5) and, lastly, the final *sacrament* of *Charama Sloka* (final couplet,) that inculcates self-abnegation and the entire denial of any source of salvation, other than *Thyself*. These, which are essentially required by all pious men seeking after Thee, Thou shouldst be gracious enough to bestow on us. Moreover, our loyalty and devotion to Thee having become thus prominent owing to the influence of pure wisdom, piety, and absolute freedom from all desire, Thou shouldst so bless us as to make us continue to offer our devotional service, so that the stream of blissful enjoyment, arising from our superior knowledge of entire dependence on Thee, may overflow its bank. As we are now united with Thee in the *relation of the enjoyed and the Enjoyer respectively*, all our sufferings caused by our separation from Thee have ceased. This is the happy day, since all our objects have been finally achieved, and we have now realised our vow to the fullest extent.

ಕಱವೈಕಳ್ಪಿನ್ಸೆನ್ರುಕಾನಂಶೇರ್ನ್ದುಣ್ಬೋಂ |
ಅಱಿವೊನ್ರುಮಿಲ್ಲಾದವಾಯ್‌ಕ್ಕುಲತ್ತುನ್ರನ್ನೈ ||
ಪಿಱವಿಪೆಱುನ್ದನೈಪ್ಪುಣ್ಣಿಯಂಯಾಮುಡೈಯೋಂ |
ಕುಱೈವೊನ್ರುಮಿಲ್ಲಾದಗೋವಿನ್ದಾವುನ್ರನ್ನೊಡು ||
ಉಱವೇಲ್ನಮಕ್ಕಿಙ್ಗೊೞಿಕ್ಕವೊೞಿಯಾ |
ಅಱಿಯಾದಪಿಳ್ಳೈಕಳೋಮನ್ಬಿನಾಲುನ್ರನ್ನೈ ||
ಶಿಱುಪೇರೞೈತ್ತನವುಂಶೀಱಿಯರುಳಾದೇ |
ಇಱೈವಾನೀತಾರಾಯ್ಪಱೈಯೇಲೋರೆಂಪಾವಾಯ್ || ... ||೨೮||

### ಪ್ರತಿಪದಾರ್ಥ.

ಕಱವೈಕಳ್—ಹಸುಗಳ
ಪಿನ್ಶೆನ್ರು—ಹಿಂದೆ ಹೋಗಿ
ಕಾನಂಶೇರ್ನ್ದು—ಕಾಡಿನಲ್ಲಿ ಎಲ್ಲರೂ ಒಟ್ಟಿಗೆ ಸೇರಿ
ಉಣ್ಬೋಂ—ಶರೀರ ಪೋಷಣೆಯನ್ನು ಮಾಡುವೆವು
ಅಱಿವು, ಒನ್ರುಂ, ಇಲ್ಲಾದ—ಕೊಂಚವೂ ತಿಳಿವಳಿಕೆ ಯಿಲ್ಲದ
ಆಯ್ಕ್ಕುಲತ್ತುನ್ರನ್ನೈ—ಗೋಪಕುಲದಲ್ಲಿ ಅವತರಿಸಿದ ನಿನ್ನನ್ನು
ಪಿಱವಿ ಪೆಱುನ್ದನೈ—ಸಜಾತೀಯನಾಗಿ ಹೊಂದಿರತಕ್ಕ
ಪುಣ್ಣಿಯಂಯಾಮುಡೈಯೋಂ—ಪುಣ್ಯವನ್ನು ನಾವು ಹೊಂದಿದ್ದೇವೆ
ಕುಱೈ ಒನ್ರುಂ—ಕುಂದಕ ಒಂದೂ
ಇಲ್ಲಾದ ಗೋವಿನ್ದಾ—ಇಲ್ಲದಿರುವ ಗೋವಿಂದನೇ
ಉನ್‌ತನ್ನೊಡು—ನಿನ್ನೊಡನೆ ನಮಗಳಿಗೆ ಉಂಟಾದ
ಉಱವು ಏಲ್—ಸಂಬಂಧವೋ ಎಂದರೆ
ನಮಕ್ಕು ಇಙ್ಗು—ನಮಗೆ ಇಲ್ಲಿ ಯಾವವಿಧದಲ್ಲಿಯೂ
ಒೞಿಕ್ಕ ಒೞಿಯಾದು—ತ್ಯಜಿಸತಕ್ಕದ್ದಲ್ಲವೇ ಅಲ್ಲ
ಅಱಿಯಾದಪಿಳ್ಳೈಕಳೋಂ—ಅಜ್ಞರಾದ ಬಾಲೆಯರು
ಅನ್ಬಿನಾಲ್ ಉನ್‌ತನ್ನೈ—ಭಕ್ತಿಯಿಂದ ನಿನ್ನನ್ನು
ಶಿಱುಪೇರ್ ಅೞೈತ್ತನವುಂ—ಮರ್ಯಾದೆಯಿಲ್ಲದ ಹೆಸರುಗಳಿಂದ ನಿನ್ನನ್ನು ಕರೆದದ್ದನ್ನು ಕುರಿತು
ಶೀಱಿಯರುಳಾದೇ—ಕೋಪಗೊಳ್ಳದೆ
ಇಱೈವಾನೀತಾರಾಯ್—ಸ್ವಾಮಿಯೇ, ನೀನು ಕೃಪೆ ಮಾಡಿ ಕೊಡಬೇಕು
ಪಱೈ—ನಮ್ಮ ಅಪೇಕ್ಷಿತಂಗಳನ್ನು
ಏಲ್, ಓರ್—ತಕ್ಕ ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಶುಭವಾಗಿ ನೆರವೇರುವುದು.

### ತಾತ್ಪರ್ಯ.

ಎಲೈ ಸ್ವಾಮಿಯೇ, ಅಜ್ಞರಾದ ನಾವು ಹಸುಗಳಹಿಂದೆ ಹೋಗಿ ಕಾಡಿನಲ್ಲಿ ಎಲ್ಲರೂ ಒಟ್ಟಿಗೆ ಸೇರಿಕೊಂಡು, ಹಸುಗಳಿಗೆ ಮೇವು ಆದಮೇಲೆ, ನಮ್ಮ ಶರೀರ ಪೋಷಣೆಯನ್ನು ಮಾಡಿಕೊಂಡಿರುವೆವು. ಕೊಂಚವೂ ತಿಳುವಳಿಕೆಯಿಲ್ಲದ ಈ ಗೋಪಕುಲದಲ್ಲಿ ನೀನು ದಯಮಾಡಿ ಅವತರಿಸಿದ ಕಾರಣ ನಮಗೆ ನೀನು ಸಜಾತೀಯನಾಗಿರುವ ಒಂದು ಪುಣ್ಯವನ್ನುಮಾತ್ರ ನಾವು ಪಡೆದಿದೇವೆ. ನಿಷ್ಕಳಂಕನಾಗಿಯೂ ಆವಾಪ್ತಸಮಸ್ತಕಾಮನಾಗಿಯೂ ಇರುವ ಶ್ರೀಕೃಷ್ಣನೇ, ನಿನ್ನೊಡನೆ ನಮಗೆ ಉಂಟಾದ ಈ ಸಂಬಂಧವು ನಿನ್ನಿಂದೆ ಹೇಗಾದರೂ ತ್ಯಜಿಸತಕ್ಕದ್ದಲ್ಲ ; ಅಜ್ಞರಾಗಿಯೂ ಬಾಲೆಯರಾಗಿಯೂ ಇರತಕ್ಕ ನಾವು ಭಕ್ತಿಪಾರವಶ್ಯದಿಂದ ನಿನ್ನನ್ನು ಮರ್ಯಾದೆಗೆ ಕೊಱತೆಯಾದ ಹೆಸರುಗಳಿಂದ ಕರೆದಿರುವೆವು ; ಅದಕ್ಕಾಗಿ ನೀನು ನಮ್ಮಮೇಲೆ ಕೋಪಗೊಳ್ಳದೆ ಕೃಪೆಮಾಡಿ ನಮ್ಮ ಇಷ್ಟಾರ್ಥಸಿದ್ಧಿಯನ್ನು ನೆರವೇರಿಸಿಕೊಡಬೇಕು. ಹೀಗೆ ನಮ್ಮ ಅಪೇಕ್ಷಿತಂಗಳನ್ನು ನೀನು ಕೃಪೆಮಾಡಿದೊಡೆ, ನಮ್ಮ ಅದ್ವಿತೀಯವಾದ ವ್ರತವು ಶುಭವಾಗಿಯೂ ಸಾಂಗವಾಗಿಯೂ ಕೊನೆಗಾಣುತ್ತದೆ.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಎಲೈ ಸರ್ವೇಶ್ವರನೇ, ಜ್ಞಾನಹೀನರಾದ ಸಂಸಾರಿಗಳನ್ನು ನಾವು ಅನುವರ್ತಿಸಿಕೊಂಡು, ಈ ನಶ್ವರವಾದ ಸಂಸಾರವನ್ನೇ ಪ್ರಾಪ್ಯವೆಂದು ಭಾವಿಸಿಕೊಂಡು ಕುಕ್ಷಿಂಭರರಾಗಿ ದೇಹಪೋಷಣೆಯನ್ನೇ ಮಾಡಿಕೊಂಡು ಅಜ್ಞಾನಿಗಳಾಗಿ ಅಲೆಯುತ್ತಾ ವೃಥಾ ಕಾಲಹರಣವನ್ನು ಮಾಡಿದೆವು; ಆದರೆ ಜ್ಞಾನಭಕ್ತಿವೈರಾಗ್ಯಾದಿಗಳು ನಮ್ಮಲ್ಲಿ ಕೊಂಚವೂ ಇಲ್ಲದಿದ್ದರೂ, ಉಪಾಯಾಂತರ ಪರಿಗ್ರಹಮಾಡುವ ದೋಷ ಯಾವುದೂ ಇಲ್ಲದ ಸತ್ಕುಲದಲ್ಲಿ ನಾವು ಜನಿಸಿದ್ದೇವೆ. ಶ್ರಿಯಃಪತಿಯಾದ ನೀನು ಮಾನುಷಜನ್ಮದಲ್ಲಿ ಹುಟ್ಟಿ, ಕೀಳಾದವರಾದ ನಮಗೆ ಅಭಿಮುಖನಾಗಿರುವುದಕ್ಕೋಸ್ಕರ ಮನುಷ್ಯಸಜಾತೀಯನಾಗಿ, ನಿನ್ನ ಉತ್ಕೃಷ್ಟಪದವಿಯನ್ನು ನೆನೆಯದೆ, ನಿನ್ನನ್ನು ಕೀಳುಮಾಡಿಕೊಂಡು ನಮ್ಮ ಕುಲದಲ್ಲಿಯೇ ಅವತರಿಸಿದೆ. ಹೀಗೆ ನಮ್ಮೊಡನೆ ಕಲೆತು ಕೂಡಾಡಿ ಬಳಕೆಯನ್ನು ಮಾಡಿ ನಮ್ಮ ಜನ್ಮವು ಸಾಫಲ್ಯವಾಗುವಂತೆ ನೀನು ಕೃಪೆಮಾಡಿದ್ದು ನಮ್ಮ ಪುಣ್ಯೋದಯವೇಸರಿ! ಅವಾಪ್ತಸಮಸ್ತಕಾಮನಾದ ಶ್ರೀಗೋವಿನ್ದನೇ, ಯಾವಲೋಕದಲ್ಲಿಯೂ ನಿನಗೆ ಅಪೇಕ್ಷಿತವಾದದ್ದೂ ಇಲ್ಲ; ಹೊಂದದೇ ಇರತಕ್ಕದ್ದೂ ಇಲ್ಲ; ಅಶರಣ್ಯಶರಣ್ಯನಾದ ನಿನ್ನೊಡನೆ ಅನನ್ಯಶರಣರಾದ ನಮಗೆ ಇರುವ ಸ್ವಸ್ವಾಮಿಭಾವ ಸಂಬಂಧವು, ಪರಿಭಾವಿಸಿ ನೋಡುವಲ್ಲಿ, ನಮ್ಮಿಬ್ಬರಿಗೂ ಸ್ವರೂಪವಾಗಿರುವುದಱಿಂದ, ಈ ನಿತ್ಯಸಂಬಂಧವು ಸರ್ವಶಕ್ತನಾದ ನಿನ್ನಿಂದಲೂ ಪ್ರಾಕೃತರಾದ ನಮ್ಮಿಂದಲೂ ನೀಗಿಸಲಳವಲ್ಲ; ಸರ್ವಸ್ಮಾತ್ಪರನೇ, ನಿನ್ನ ಮಹಿಮೆಯನ್ನು ಅಱಿಯದೆ ಪೂರ್ವದಲ್ಲಿ ಅಜ್ಞಾನದಿಂದಲೂ, ನಿನ್ನ ಮಹಿಮೆಯನ್ನು ತಿಳಿದಮೇಲೂ ಪ್ರೇಮಾತಿಶಯದಿಂದಲೂ, ನಿನ್ನನ್ನು ಏಕವಚನದಲ್ಲಿ ಹೆಸರುಹಿಡಿದು ಕೂಗಿ ಗೌರವಹೀನವಾಗಿ ನಿನ್ನನ್ನು ಕಂಡರೂ, ಇದಕ್ಕಾಗಿ ನಮ್ಮಮೇಲೆ ಕೋಪಗೊಳ್ಳದೆ ನಮ್ಮ ಅಪರಾಧವನ್ನೆಲ್ಲಾ ಕ್ಷಮಿಸಿ ನಾವು ಕೇಳಿಕೊಂಡ ಪುರುಷಾರ್ಥಂಗಳನ್ನು ದಯವಿಟ್ಟು ಅನುಗ್ರಹಿಸಬೇಕು. ಹೀಗೆಮಾಡಿದರೆ, ನಮ್ಮ ಅದ್ವಿತೀಯವಾದ ಈ ವ್ರತವು ಸಫಲವಾಗಿಯೂ ಸಾಂಗವಾಗಿಯೂ ನೆಱವೇರುತ್ತದೆ.

---

28. O Lord of lords! we have been hitherto enveloped in ignorance, and have consequently followed the low pursuits of the ordinary dwellers on this earth in the mistaken belief that this transcient mortal life is the final goal of our existence, have accordingly been attending to the gratification of low passions and the wants of our stomach like so many ignoramuses, and have thus wasted all these days without turning them to good account; and although we have been without any of the facilities for acquiring pure wisdom, piety, loyalty, or absolute freedom from all desires, which qualifications surely lead us on to Thee, we have at any rate the rare merit of being born in the noble family of those devotees who never resorted to any source of salvation other than Thyself. Eminently exalted as Thy position is, Thou hast graciously condescended to incarnate amongst us, as a human being, to be accessible to us all, unmindful of Thy August Position, and demeaning Thyself in a way, so that Thou mayest be like unto us in every respect. This merciful act of Thine, so characteristic of Thy Noble Nature, is the result of our good fortune. O Lord Govinda! the Being to Whom there is nothing to be desired or attained, as Thou art perfect, the relationship subsisting between Thyself (the Refuge of the refugeless) and ourselves (who find no other refuge than Thyself) is, on deeper consideration, found to be so natural and permanent that it cannot be broken or affected either by Thee, the All-Powerful Supreme Being, or by poor helpless mortals like ourselves. O Lord of lords, the Highest of the high! our expressions of discourtesy which we may have often employed in addressing Thee at a time when we were ignorant of Thy Preeminence and Valour, or subsequently out of *love* even after understanding Thy Glorious Nature, Thou shouldst not take any notice of; but shouldst kindly forgive us our faults, and vouchsafe us, Thy humble devotees, the object of our mission. Should Thou be so pleased, we shall be in a fair way to see our vow brought to a successful issue.

ಶಿಱ್ಱಂಶಿಱುಕಾಲೇವನ್ದುನ್ನೈ ಚ್ಚೇವಿತ್ತು |
ಪೊಱ್ಱಾಮರೈಯಡಿಯೇಪೋಱ್ಱುಂಪೊರುಳ್ಕೇಳಾಯ್ ‖
ಪೆಱ್ಱಮೇಯ್ತ್ತುಣ್ಣುಙ್ಕುಲತ್ತಿಱ್ಪಿಱನ್ದನೀ |
ಕುಱ್ಱೇವಲೆಙ್ಗಳೈಕ್ಕೊಳ್ಳಾಮಱ್ಪೋಕಾ ‖
ದಿಱ್ಱೈಪ್ಪಱೈಕೊಳ್ವಾನನ್ಱುಕಾಣ್ಗೋವಿನ್ದಾ |
ಎಱ್ಱೈಕ್ಕುಮೇಪೇಱ್ಱವಿಕ್ಕುಮುನ್ಱನ್ನೋಡು ‖
ಉಱ್ಱೋಮೇಯಾವೋಮುನಕ್ಕೇನಾಮಾಟ್ಚೆಯ್ವೋಮ್ |
ಮಱ್ಱೈನಙ್ಗಾಮಙ್ಗಳ್ಮಾಱ್ಱೇಲೋರೆಂಪಾವಾಯ್ ‖ ... ‖೨೯‖

ಪ್ರತಿಪದಾರ್ಥ.

ಶಿಱ್ಱಂಶಿಱುಕಾಲೇ—ಬೆಳಬೆಳಗ್ಗಿನಜಾವದಲ್ಲಿಯೇ
ವನ್ದುಉನ್ನೈಸೇವಿತ್ತು—ನಾವೇ ಬಂದು ನಿನ್ನನ್ನು ಸೇವಿಸಿ
ಉನ್‌ಪೊಱ್ಱಾಮರೈಯಡಿಯೇ—ನಿನ್ನ ದಿವ್ಯ ಪಾದ ಕಮಲಂಗಳನ್ನು
ಪೋಱ್ಱುಂ—ಮಂಗಳಾಶಾಸನಮಾಡುವ
ಪೊರುಳ್‌ಕೇಳಾಯ್—ಪ್ರಯೋಜನವನ್ನು ಕೇಳು
ಪೆಱ್ಱಂಮೇಯ್ತ್ತು—ಹಸುಗಳನ್ನು ಮೇಯಿಸಿ ಕೊಂಡು
ಉಣ್ಣುಂಕುಲತ್ತಿಲ್‌ಪಿಱನ್ದನೀ—ಜೀವಿಸುವ ಗೋಪಾಲ ಕರ ಕುಲದಲ್ಲಿ ಅವತರಿಸಿದ ನೀನು
ಕುಱ್ಱೇವಲ್—ಅಂತರಂಗ ಕೈಂಕರ್ಯಗಳನ್ನು
ಎಙ್ಗಳೈ ಕೊಳ್ಳಾಮಲ್—ನಮ್ಮಿಂದ ಅಂಗೀಕರಿಸದೆ
ಪೋಕಾದು—ಹೋಗಕೂಡದು
ಇಱ್ಱೈಪ್ಪಱೈಕೊಳ್ವಾನ್—ಈಗ ಮಾತ್ರ ಬಂದು ಪ್ರಯೋಜನವನ್ನು ಅಪೇಕ್ಷಿಸಿ
ಅನ್ಱುಕಾಣ್‌ಗೋವಿಂದಾ—ಬಂದವರಲ್ಲವೈಯ್ಯಾ ಗೋವಿಂದಾ
ಎಱ್ಱೈಕ್ಕುಂ—ಕಾಲತತ್ವ ಇರುವವರಿಗೂ
ಏಳೇಳ್‌ಪಿಱವಿಕ್ಕುಂ—ಏಳುಏಳಾಗಿ ಲೆಕ್ಕಮಾಡುವ ಇಪ್ಪತ್ತೊಂದು ತಲೆಮೊಱೈಯಲ್ಲಿಯೂ
ಉನ್ ತನ್ನೋಡು—ನಿನ್ನೊಡನೆ
ಉಱ್ಱೋಮೇಯಾವೋಂ—ಅನನ್ಯಾರ್ಹರಾಗಿ ಆಗುವೆವು
ಉನಕ್ಕೇನಾಂ ಆಳ್ ಶೆಯ್ವೋಂ—ನಿನಗೇ ದಾಸ್ಯವನ್ನು ವಹಿಸಿರುವೆವು
ಮಱ್ಱೈನಂಕಾಮಂಗಳ್—ಮತ್ತೆ ನಮ್ಮ ಇತರ ಅಪೇಕ್ಷಿತಂಗಳನ್ನು
ಮಾಱ್ಱು—ನೀಗಿಬಿಡು
ಏಲ್, ಓರ್—ತಕ್ಕ, ಅದ್ವಿತೀಯವಾದ
ಎಂಪಾವೈ—ಈ ನಮ್ಮ ವ್ರತವು
ಆಯ್—ಶುಭವಾಗಿ ತೀರ್ಗಡೆಯಾಗುವುದು.

ತಾತ್ಪರ್ಯ.

ಎಲೈ ಶ್ರೀಕೃಷ್ಣಸ್ವಾಮಿಯೇ, ಬೆಳಬೆಳಗ್ಗಿನಜಾವದಲ್ಲಿಯೇ ನಾವೇ ಇಲ್ಲಿಗೆ ಬಂದು ಪರಾತ್ಪರನಾದ ನಿನ್ನನ್ನು ಸೇವಿಸಿ ನಿನ್ನ ದಿವ್ಯಪಾದಕಮಲಂಗಳಿಗೆ ಮಂಗಲಾಶಾಸನವನ್ನು ಮಾಡುವುದರಿಂದ ನಮಗೆ ಪ್ರಾಪ್ತವಾಗುವ ಪುರುಷಾರ್ಥವನ್ನು ಅವಧರಿಸು, ಅರಿಕೆಮಾಡಿಕೊಳ್ಳುವೆವು. ಹಸುಗಳನ್ನು ಮೇಯಿಸಿಕೊಂಡು ಜೀವಿಸುವ ಅಜ್ಞರಾದ ಗೋಪಾಲಕರ ಕುಲದಲ್ಲಿ ಅವತರಿಸಿದ ನೀನು ನಮ್ಮಿಂದ ಅಂತರಂಗಕೈಂಕರ್ಯವನ್ನು ಅಂಗೀಕರಿಸದೆ ಹೋಗಕೂಡದು ; ಮತ್ತು ಈಗಿನಮಾತ್ರಕ್ಕೆ ಬಂದು ಪುರುಷಾರ್ಥವನ್ನು ಕರುಣಾಳುವಾದ ನಿನ್ನಿಂದ ಅಪೇಕ್ಷಿಸಿ ನಾವು ಬಂದವರಲ್ಲವೈಯ್ಯಾ, ಗೋವಿಂದಾ ; ಏಳು ಏಳಾಗಿ ಲೆಕ್ಕಮಾಡುವ ಇಪ್ಪತ್ತೊಂದು ತಲೆಮುಱೈಯಲ್ಲಿಯೂ ಅಲ್ಲದೆ ಕಾಲತತ್ವವಿರುವವರಿಗೂ ಅನನ್ಯಾರ್ಹಶೇಷರಾದ ನಾವು ನಿನ್ನೊಡನೆ ಸೇರಿ ನಿನ್ನಲ್ಲಿ ದಾಸ್ಯವನ್ನು ವಹಿಸಿಕೊಂಡು ಬಾಳತಕ್ಕವರು ; ನಮಗೆ ಇರತಕ್ಕ ಇತರ ಅಪೇಕ್ಷಿತಂಗಳನ್ನೆಲ್ಲಾ ನೀನು ನೀಗಿಬಿಡಬಹುದು ; ಅದು ಯಾವುದೂ ನಮಗೆ ಬೇಡ. ಹೀಗೆ ಮಾಡಿದಲ್ಲಿ, ನಮ್ಮ ಅದ್ವಿತೀಯವಾದ ಈ ವ್ರತವು ಸಫಲವಾಗಿ ಮುಗಿಯುವುದರಲ್ಲಿ ಏನೂ ಸಂಶಯವಿಲ್ಲ.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಎಲೈ ಸರ್ವರಕ್ಷಕನಾದ ಶ್ರೀಕೃಷ್ಣನೇ, ಸತ್ವೋದ್ರೇಕ ಕಾಲವು ಪ್ರಾಪ್ತವಾಗಿ, ಜ್ಞಾನೋದಯವಾದಕೂಡಲೆ ನಿನ್ನ ವಿಶ್ಲೇಷವನ್ನು ಸಹಿಸಲಾರದೆ ನಿನ್ನನ್ನು ಸೇವಿಸಲು ನಾವು ಬಂದು ಸ್ಪೃಹಣೀಯವಾಗಿಯೂ ಸೌಗಂಧ್ಯಸೌಕುಮಾರ್ಯಲಾವಣ್ಯಗಳಿಂದ ಪರಮ ಭೋಗ್ಯವಾದ ನಿನ್ನ ತಿರುವಡಿಗಳನ್ನೇ ನಾವು ಮಂಗಳಾಶಾಸನಮಾಡಿಕೊಂಡಿರುವುದಕ್ಕೆ ಪ್ರತಿ ಪ್ರಯೋಜನವು ಏನೆಂದರೆ, ಅಜಿಕೆಮಾಡುವೆವು, ಅವಧರಿಸು—ಸ್ವರಕ್ಷ್ಯರಕ್ಷಣಕ್ಕೋಸ್ಕರ ಜ್ಞಾನಜನ್ಮವಿಶಿಷ್ಟನಾಗಿ ಅವತರಿಸಿದ ನೀನು ದಾಸಭೂತರಾದ ನಮ್ಮಿಂದ ಕೈಂಕರ್ಯವನ್ನು ಮಾಡಿಸದೆ ಇರಕೂಡದು ; ಈದಿವಸದಮಟ್ಟಿಗೆ ನಾವು ಬಂದುಕೇಳಿಕೊಂಡೆವೆಂದು ಭಾವಿಸಿ ನಾವು ಅಪೇಕ್ಷಿಸಿದ ಒಂದು ಪುರುಷಾರ್ಥವನ್ನು ಅನುಗ್ರಹಿಸಿಬಿಟ್ಟು, ನಮ್ಮನ್ನು ಹಿಂದಕ್ಕೆ ಕಳುಹಿಸಿಬಿಡಬಹುದೆಂದು ನೀನು ಆಲೋಚಿಸಕೂಡದು ; ಯಾಕೆಂದರೆ ನಾವು ಅಂತಹ ಅಲ್ಪವಾದ ಅಭಿಸಂಧಿಯುಳ್ಳವರಾಗಿ ನಿನ್ನನ್ನು ಸಮೀಪಿಸಿದವರಲ್ಲ; ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಿನ್ನೊಡನೆ ಏಕಧರ್ಮಿಗಳನ್ನುವಹಾಗೆ ನಾವು ಸಂಬಂಧಿಸಿರತಕ್ಕವರೇಸರಿ. ಹಾಗೆ ಸಂಬಂಧಿಸಿಕೊಂಡಿದ್ದು, ನಾವು ನಮ್ಮ ನಮ್ಮ ಅಭಿರುಚಿಗೆ ಮಾತ್ರ ಅನುಗುಣವಾಗದೆಯೇ, ಅಥವಾ ನೀನೂ ನಾವೂ ಕಲೆತು ಉಂಟಾಗುವ ಅಭಿರುಚಿಗೂ ಅನುಗುಣವಾಗದೆಯೇ, ನಿನ್ನ ಅಭಿರುಚಿಮಾತ್ರವನ್ನೇ ಅನುಸರಿಸಿದ್ದಾಗಿಯೇ ಅನನ್ಯಾರ್ಹಶೇಷಭೂತರಾದ ನಾವು ಕಾಲತತ್ವವಿರುವವರಿಗೂ ಮಂಗಳಾಶಾಸನವೆಂಬ ಕೈಂಕರ್ಯವೃತ್ತಿಯನ್ನು ಮಾಡತಕ್ಕವರೇಸರಿ. ನಾವು ರಾಜಸತಾಮಸವೃತ್ತಿಗಳಿಂದ ಅಭಿಹತರಾಗಿ ಮೇಲೆ ಹೇಳಿದ್ದನ್ನಲ್ಲದೆ ದೃಷ್ಟಫಲಂಗಳನ್ನು ಒಂದು ಕಾಲದಲ್ಲಿ ಅಪೇಕ್ಷಿಸಿದರೂ, ಹಿತಪರನಾದ ನೀನು ಅಂತಹ ಅಪೇಕ್ಷಿತಂಗಳನ್ನು ಲಾಲಿಸಲೂ ಬೇಡ, ಕೊಡಲೂ ಬೇಡ. ಹೀಗೆ ನೀನು ದಾಸಭೂತರಾದ ನಮ್ಮ ವಿಷಯದಲ್ಲಿ ದಯಾಪಾಲಿಸಿದಲ್ಲಿ, ಇದೇ ನಾವು ಉದ್ದೇಶಿಸಿದ ಅದ್ವಿತೀಯವಾದ ಭಗವತ್ಕೈಂಕರ್ಯರೂಪವ್ರತದಮುಖ್ಯಫಲವು.

---

29. O Lord Srikrishna, the Saviour of all! On the appearance of *Satva* principle, we were favored with a spiritual insight, when, being unable to bear any longer our separation from Thee, we have proceeded at once to approach and worship Thee; and thus situated, we shall enumerate, with Thy permission, the main object of our devotional service accompained with the halleluiahs in Thy praise at Thy Golden Feet, so immensely enjoyable to Thy devotees for their special fragrance, peculiar attraction, their excellent delicacy, and special handsomeness: please condescend to hear. (1) Thou, Who incarnated on earth, with all Thy usual spirituail wisdom, to put down the wicked and protect the worthy, shouldst not remain quiet, without receiving from us, Thy devotees, our services, however menial, due to Thee; (2) Thou shouldst not think that we approached Thee just for to-day with a request, and that we could be disposed of finally, on complying with the same. We have not come near Thee with such paltry motives, but we are to be one with Thee, exercising the same kind of influence or vision in all places, at all times, and under all circumstances for ever and ever; and our devotional service in the form of singing halleluiahs in Thy praise should last for all eternity, its mode being determined not by our taste, nor by the conjoined taste brought about by Thee as well as by ourselves (when Thyself and ourselves manifest *as one whole*) but by Thy Absoute Will alone. If we should ever aspire for any transcient worldly gain, being misled by the vicious influence of such principles as *Rajas or Tamas*, Thou, as our only well-wisher, shouldst not give ear to such paltry requests, nor shouldst Thou deign to bless us with them. Then and then alone, all our attempts to hold an uninterrupted communion with Thee will be brought to a successful fruition.

ವಙ್ಗಕ್ಕಡಲ್ಕಡೈನ್ದಮಾದವನೈಕ್ಕೇಶವನೈ |
ತ್ತಿಙ್ಗಟ್ಟಿರುಮುಕತ್ತುಚ್ಚೇಯಿೞೈಯಾರ್ಶೆನ್ಱಿಱೈಞ್ಜಿ ||
ಯಙ್ಗಪ್ಪಱೈಕೊಣ್ಡವಾಱ್ಱೈಯಣಿಪುದುವೈ |
ಪ್ಪೈಙ್ಗಮಲತ್ತಣ್ಡೆರಿಯಲ್ಪಟ್ಟರ್ಪಿರಾನ್ಕೋದೈಶೊನ್ನ ||
ಶಙ್ಗತ್ತಮಿೞ್ಮಾಲೈಮುಪ್ಪದುಮ್ತಪ್ಪಾಮೇ |
ಯಿಙ್ಗಿಪ್ಪರಿಶುರೈಪ್ಪಾರೀರಿರಣ್ಡುಮಾಲ್ವರೈತ್ತೋಳ್ ||
ಶ್ಶೆಙ್ಗಣ್ತಿರುಮುಕತ್ತುಚ್ಚೆಲ್ವತ್ತಿರುಮಾಲಾಲ್ |
ಲೆಙ್ಗುನ್ತಿರುವರುಳ್ಪೆಱ್ಱಿನ್ಬುಱುವರೆಮ್ಬಾವಾಯ್ || ... |೩೦||

ಪ್ರತಿಪದಾರ್ಥ.

ವಙ್ಗಕ್ಕಡಲ್ಕಡೈನ್ದ—ಹಡಗುಗಳನ್ನುಳ್ಳ ಜಲಧಿಯನ್ನು ಕಡೆದು ಅಮೃತವನ್ನು ಕೊಟ್ಟ
ಮಾಧವನೈ ಕೇಶವನೈ—ಶ್ರಿಯಃಪತಿಯಾದ ಸರ್ವೇಶ್ವರನನ್ನು
ತಿಙ್ಗಳ್ತಿರುಮುಕತ್ತು—ಪೂರ್ಣಚಂದ್ರಮುಖಿಯರಾದ
ಶೇಯಿೞೈಯಾರ್—ದಿವ್ಯಾಭರಣಭೂಷಿತರಾದ ಗೋಪಿ[ಯರು
ಶೆನ್ಱಿಱೈಞ್ಜಿ—ಬಂದು ಸ್ತುತಿಸಿ
ಅಙ್ಗು ಅಪ್ಪಱೈ—ಆ ಗೋಕುಲಬೃಂದಾವನದಲ್ಲಿ ಪಟಹ ವ್ಯಾಜದಿಂದ ಕೈಂಕರ್ಯವೃತ್ತಿಯನ್ನು
ಕೊಂಡವಾಱ್ಱೈ—ಹೊಂದಿದ ಪ್ರಕಾರವನ್ನು
ಅಣಿಪುದುವೈ—ಸುಂದರವಾದ ಶ್ರೀವಿಲ್ಲಿಪುತ್ತೂರಿನ
ಪೈಙ್ಗಮಲತ್ತಣ್ಡೆರಿಯಲ್—ಪಚ್ಚೆಯದಾದ ಶೀತಳ ಜಪಸರದಿಂದ (ಅಲಂಕೃತರಾದ)
ಪಟ್ಟರ್ಪಿರಾನ್—ಕವಿಶ್ರೇಷ್ಠರಾದ ಪೆರಿಯಾೞ್ವಾರವರ (ಪುತ್ರಿಯಾದ)
ಕೋದೈಶೊನ್ನ—ಗೋದಾದೇವಿಯು ಅಪ್ಪಣೆಕೊಡಿಸಿದ
ಶಙ್ಗತ್ತಮಿೞ್ಮಾಲೈ—ಸಂಘದಪಂಡಿತರೊಕೂಡ ಮೆಚ್ಚುವಂತಹ ದ್ರಾವಿಡದಲ್ಲಿ ರಚಿಸಿದ ಮಾಲಾರೂಪವಾದ
ಮುಪ್ಪದುಂತಪ್ಪಾಮೇ—ಮುವ್ವತ್ತು ಪದ್ಯಗಳನ್ನೂ ತಪ್ಪದೆ
ಇಙ್ಗು ಇಪ್ಪರಿಶು—ಈ ಭೂಮಂಡಲದಲ್ಲಿ ಈ ಪ್ರಕಾರ
ಉರೈಪ್ಪಾರ್—ಅನುಸನ್ಧಾನಮಾಡುವವರು
ಈರಿರಣ್ಡುಮಾಲ್ವರೈ—ನಾಲ್ಕು ದೊಡ್ಡ ಪರ್ವತಗಳನ್ನು
ತೋಳ್—ಹೋಲುವ ಚತುರ್ಭುಜಗಳುಳ್ಳ
ಶೆಙ್ಗಣ್ ತಿರುಮುಕತ್ತು—ಕೆಂಪದರ್ದ ದಿವ್ಯನೇತ್ರಂಗಳನ್ನೂ ದಿವ್ಯಮುಖವನ್ನೂ ಉಳ್ಳ
ಶೆಲ್ವತ್ತಿರುಮಾಲಾಲ್—ಉಭಯ ವಿಭೂತ್ಯೈಶ್ವರ್ಯವುಳ್ಳಂಥಾ ನಾರಾಯಣನಿಂದ
ಎಙ್ಗುಂತಿರುವರುಳ್ಪೆಱ್ಱು—ಸರ್ವತ್ರ ಅಸದೃಶವಾದ ಕೃಪೆಯನ್ನು ಹೊಂದಿ
ಇನ್ಬುಱುವರ್—ಬ್ರಹ್ಮಾನಂದ ಯುಕ್ತರಾಗಿರುವರು
ಎಂಬಾವಾಯ್—ಸಾಕ್ಷಾಲ್ಲಕ್ಷ್ಮೀದೇವಿಯಹಾಗೆ

ತಾತ್ಪರ್ಯ.

ಹಡಗುಗಳಿಂದ ಕ್ಷೋಭಿಸುವ ವಿಸ್ತಾರವಾದ ಜಲಧಿಯನ್ನು ಮಥನಮಾಡಿ ತನ್ನ ಆಪ್ತವರ್ಗಂಗಳಾದ ದೇವತೆಗಳಿಗೆ ಅಮೃತವನ್ನಿತ್ತ ಶ್ರಿಯಃಪತಿಯಾದ ಸರ್ವೇಶ್ವರನನ್ನು ಪೂರ್ಣಚಂದ್ರಮುಖಿಯರಾಗಿಯೂ ದಿವ್ಯಾಭರಣಭೂಷಿತರಾಗಿಯೂ ಇದ್ದ ಗೋಪಿಯರು ಸಮೀಪಿಸಿ ಮಂಗಳಾಶಾಸನಮಾಡಿ ಆ ಗೋಕುಲಬೃಂದಾವನದಲ್ಲಿ ಪಟಹಪ್ರಾಪ್ತಿವ್ಯಾಜದಿಂದ ಕೈಂಕರ್ಯವೃತ್ತಿಯನ್ನು ಸ್ವೀಕರಿಸಿದರು. ಹಾಗೆ ನಡೆದ ಆ ಪ್ರಕಾರವನ್ನು ಶ್ರೀವಿಲ್ಲಿಪುತ್ತೂರಿನಲ್ಲಿ ವಿಜಯಮಾಡಿದ್ದಂಥಾ ಪಚ್ಚೆಯದಾದ ಶೀತಳ ಜಪಮಾಲಾಲಂಕೃತರಾದಂಥಾ ಕವಿಶ್ರೇಷ್ಠರಾದ ಪೆರಿಯಾೞ್ವಾರವರ ಪುತ್ರಿಯಾದ ಶ್ರೀಗೋದಾದೇವಿಯು "ತಿರುಪ್ಪಾವೈ" ಎಂಬ ದ್ರಾವಿಡ ಗ್ರನ್ಥದಮೂಲಕ ಅಪ್ಪಣೆಕೊಡಿಸಿರುವರು. ದಕ್ಷಿಣ ಮಧುರಾಪುರಿಯಲ್ಲಿದ್ದ ಸಂಘದ ವಿದ್ವಾಂಸರೂ ಮೆಚ್ಚುವಂಥಾ ದ್ರಾವಿಡ ಶೈಲಿಯಲ್ಲಿ ರಚಿಸಲ್ಪಟ್ಟ ಮಾಲಾರೂಪವಾದ ಈ ಗ್ರನ್ಥದ ಮುವ್ವತ್ತು ಪದ್ಯಂಗಳನ್ನು ತಪ್ಪದೆ ಈ ಭೂಮಂಡಲದಲ್ಲಿ ಮೇಲೆ ಹೇಳಿದಪ್ರಕಾರ ಅನುಸನ್ಧಾನಮಾಡುವವರು ಪರ್ವತಚತುಷ್ಟಯವನ್ನು ಹೋಲುವ ಚತುರ್ಭುಜಗಳುಳ್ಳವನಾಗಿಯೂ ಕೆಂಪದರ್ದ ದಿವ್ಯನೇತ್ರಂಗಳಿಂದಲೂ ದಿವ್ಯಮುಖಾರವಿಂದದಿಂದಲೂ ಶೋಭಿಸುವಂಥಾವನಾಗಿಯೂ ಉಭಯವಿಭೂತ್ಯೈಶ್ವರ್ಯವುಳ್ಳಂಥವನಾಗಿಯೂ ಕಂಗೊಳಿಸುವ ಶ್ರೀಮನ್ನಾರಾಯಣನಿಂದ ಅಸದೃಶವಾದ ಕೃಪೆಯನ್ನು ಹೊಂದಿ ಸಾಕ್ಷಾಲ್ಲಕ್ಷ್ಮೀದೇವಿಯಹಾಗೆ ಬ್ರಹ್ಮಾನಂದಯುಕ್ತರಾಗಿರುವರು.

ಸ್ವಾಪದೇಶಾರ್ಥ—ರಹಸ್ಯಾರ್ಥ.

ಆಶ್ರಿತರಾದ ಚೇತನರು ಪರಿಗ್ರಹಿಸಿದ ಶರೀರಗಳೆಂಬ ನಾವೆಗಳಿಗೆ ಯಾವವಿಧವಾದ

ಭಂಗವೂ ಬಾರದಂತೆ, ಸಂಸಾರವೆಂಬ ಸಾಗರದಲ್ಲಿ ಸರ್ವಲೋಕಶರಣ್ಯನಾದ ಸರ್ವೇಶ್ವರನು ತನ್ನ ಸಂಕಲ್ಪವೆಂಬ ಮಂದರಪರ್ವತವನ್ನು ನಾಟಿ, ಕೃಪೆಯೆಂಬ ರಜ್ಜುವಿನಿಂದ ಅದನ್ನು ಸುತ್ತಿ, ಕಟಾಕ್ಷವೆಂಬ ಹಸ್ತಗಳಿಂದ ಕಡೆದು, ಸಾಕ್ಷಾತ್ ಶ್ರೀಲಕ್ಷ್ಮೀದೇವಿಗಿಂತಲೂ ಪ್ರೇಮಾಸ್ಪದವಾದ ಅಮೃತವೆಂಬ ಆತ್ಮನನ್ನು ಸ್ವರೂಪಸತ್ತಾವಿಶಿಷ್ಟವನ್ನಾಗಿಮಾಡಿ ತನ್ನ ಶೇಷಭೂತನನ್ನಾಗಿಮಾಡಿಕೊಂಡನು ; ಮತ್ತು ಇಂತಹ ಚೇತನರಿಗೆ ಅನುಭವವಿರೋಧಿಗಳಾದ ವಿಷಯವೆಂಬ ಭೋಕ್ತೃತ್ವಾದಿಗಳನ್ನು ನಿವಾರಣೆಮಾಡಿ ಅನುಗ್ರಹಿಸಿದನು. ಇಂತಹ ಮಹೋಪಕಾರಕನಾದ ಶ್ರೀಕೃಷ್ಣನನ್ನು ಆಹ್ಲಾದಕರವಾದ ದಿವ್ಯ ಮುಖಾರವಿಂದವುಳ್ಳವರಾಗಿಯೂ ತದೇಕವಿಷಯವಾದ ಜ್ಞಾನಭಕ್ತಿವೈರಾಗ್ಯಭೂಷಿತರಾಗಿಯೂ ಅನನ್ಯಾರ್ಹರಾದ ಭಾಗವತರು ತಮ್ಮ ಸ್ವಾಮಿಯು ಬಿಜಯಮಾಡಿರುವ ಸ್ಥಳಕ್ಕೇ ವಿಶ್ಲೇಷಾಸಹಿಷ್ಣುಗಳಾಗಿ ಸಮೀಪಿಸಿ ಅವನನ್ನು ಪೂಜಿಸಿ, ಪಟಹರೂಪವಾದ ಪಾರಿತೋಷಿಕವನ್ನು ಸಂಪಾದನಮಾಡುವುದಕ್ಕೋಸ್ಕರವೆಂಬ ವ್ಯಾಜವನ್ನು ಲೋಕದವರಿಗೆ ತೋರಿಸಿ, ವಸ್ತುತಃ ಭಗವತ್ಕೈಂಕರ್ಯವೃತ್ತಿಯನ್ನು ಪರಿಗ್ರಹಿಸಿದರು. ಈ ಕ್ರಮವನ್ನು ಪೆರಿಯಾಳ್ವಾರವರ (ವಿಷ್ಣುಚಿತ್ತ) ಪುತ್ರಿಯಾದ ಶ್ರೀಗೋದಾದೇವಿಯು ಲೋಕಹಿತಾರ್ಥವಾಗಿ ದ್ರಾವಿಡಭಾಷೆಯಲ್ಲಿ ಗ್ರಂಥರೂಪವಾಗಿ ಅಪ್ಪಣೆಕೊಡಿಸಿದ "ತಿರುಪ್ಪಾವೈ" ಎಂಬ ಶ್ಲಾಘ್ಯವಾದ ಈ ದಿವ್ಯ ಪ್ರಬಂಧವನ್ನು ಕ್ರಮವಾಗಿ ಅನುಸಂಧಾನಮಾಡುವವರು ಪರ್ವತಚತುಷ್ಟಯವನ್ನು ಹೋಲುವ ಪೀನಚತುರ್ಭುಜಗಳುಳ್ಳಂಥವನಾಗಿಯೂ ಕೆಂಪಡರ್ದ ದಿವ್ಯನೇತ್ರಾಲಂಕೃತಮುಖಮಂಡಲವುಳ್ಳಂಥವನಾಗಿಯೂ ಉಭಯವಿಭೂತಿಸಂಪನ್ನನಾಗಿಯೂ ಕಂಗೊಳಿಸುವ ಶ್ರಿಯಃಪತಿಯಿಂದ ಯಾವಾಗಲೂ ವಿಚ್ಛೇದಬಾರದಂತೆ ಕೃಪೆಯನ್ನು ಹೊಂದಿ ಬ್ರಹ್ಮಾನಂದನಿರ್ಭರರಾಗಿ ಸಾಕ್ಷಾಲ್ಲಕ್ಷ್ಮಿಯಂತೆ ಸುಖವಾಗಿ ಬಾಳುವರು.

---

30. The Lord of the Universe and the Saviour of the whole world, has made an arrangement to churn the ocean of metempsychosis, on which floats a number of sea-worthy vessels supplied with all appertenances in the shape of human bodies with proper organs and senses, making His Absolute Will a churning-stick similar to the Mandara-mountain, tying it with the rope of His Benign Mercy, and churned it with His Hands in the form of His Divine Glances of Grace, and thereby obtained the ambrosia in the form of *purified human soul*, more beloved than even Lakshmi, His own Consort, and finally established His *proprietorship or sovereignty* over the souls, which fact had been ignored. Moreover, to see such souls follow a righteous course, He has kindly romoved all poisonous and therefore baneful obstacles in their way—such as the idea of selfishness in all enjoyments. Such a benevolent and all-loving Lord Srikrishna, His Votaries with cheerful and smiling faces approached, even to the very ploce where He was, unable to bear any longer their separation from Him, and endowed with true wisdom and loyalty and renunciation of all enjoyable acts other than the Almighty Himself, to adore Him, in the fulness of their heart, chanting halleluiahs in His praise; aad secured the boon of *eternal companionship with Him* in the due performance of their devotional service, although to the ordinary world it appeared that they approached the Almighty with a reqnest to favor them with a Muraja-instrument as a token of His Grace and Reward.

The incidents related above have been kindly made the *theme* of a Tamil Poem called *Tiruppávai,* containing thirty stanzas by Sri Góda Dévi (otherwise called Andâl), the foster-daughter of Saint Periyâlvâr, the Poet of Villiputtoor, for the benefit of mankind ; such of them as recite, in order, the stanzas in the prescribed from, *realising its deep and philosophical significance,* will be favored with eternal happiness and uninterrupted bliss at the hands of the Great Being Who commands the glory of both the worlds—celestial and terrestrial—and Who is adorned with four hands as majestic as four lofty mountains indicative of His ever-flowing bounty, and with a resplendent and smiling face and lovable lotus-like eyes.

* * Both the scholars (Reverend T. H. Growse M. A., and Reverend G. U. Pope, M. A., D. D.) of Oxford have asked me more than once why the educated Vaishnavas of Southern India do not publish what would give the world at large a correct idea of our Visishtâdvaita School of Thought, and raise the religion of the Vaishnavites in the estimation of European scholars whose views are now but one-sided, formed, as they are, through the spectacles given by the Advaitic writers of Upper India.

I am glad, therefore, that your effort will be the first suitable response to such challenge, and will interest all European and Indian scholars interested in such Oriental Literature and kindred lines of research. As you are aware, there are some admirable works of Râmânuja and Védantadésika, a translation of which, in part at least, will provide a powerful study and a proof of such authors' brain-power, and points of view practically unknown outside the Tamil Land. The effect of such English Translations of our South-Indian sacred works must be, from their freshness, wonderfully vital and enduring.

Wishing you every success in your bold venture,

I am, yours faithfully,

(Sd.) V. KRISHNAMACHARY.

---

No. 2. Mr. M. RANGACHARLU, Retired Delta Superintendent, Godavari District, writes :—

Tanuku,
*Godavari District,*
25*th Oct.* 1898.

My Dear Mr. *SRINIVASAIENGAR*,

This morning I, strangely enough, found your pamphlets and letter on my easy chair left by the postman ; your letter pleased me very much ; so did your interesting brochures. The reading of the title-page itself sent a thrill of joy through my body, and I was extremely happy to find that the inspired utterances of our Alvârs, whose exemplary lives and works are now a sealed-book to the outer world, are for the first time placed before the thinking-world. It has been my life-long wish to let modern educationists know what our Pûrvâchâryâs have to say concerning some of the most important problems of life and death. I am extremely happy to note that men of your education have taken to diffusing Visishtâdvaitic knowledge.

(*a*) In regard to the get-up of the books, I must tell you that the two brochures are well got-up.

(*b*) Regarding the quality of the subject matter, I do not think that I am competent to give an opinion; but as you expressed a wish that I should tell you what I thought of these brochures, I deem it my duty to write to you that the Introductions to Parts I and II are very well-written, and reflect great credit on you. The Introduction to Part II is particularly interesting, consisting, as it does, of extracts from different standard works which justify "Idolatry" as practised by our Rishi-forefathers and their Aryan disciples. The line of distinction you draw between *Murta* (మూర్త) and *Amûrta* (అమూర్త) forms of Deity is very clear, and is a sufficient answer to those who hold that *Sagunôpâsana* (సగుణోపాసన) is not countenanced by the Vêdanta. Visishtâdvaitism is the Yoga of *Love*, and those who are not blessed with devotional instincts cannot perceive its sublimity:—so said Sri Râmanujâchârya before he entered on a criticism of Sri Sankarâcharya's Monistic views (*Vide* Sri Bhâshya: జిజ్ఞాసాధికరణం). In my opinion, in a treatise of this kind more light will have to be thrown on the "Chapter on Vishnu's weapons and ornaments (అస్త్రభూషణాధ్యాయము) of Sri Vishnu-purana, and I trust you will look to this in your future series.

The statement you make that "*Archa-forms* present, in a small compass, the whole vista of universal creation" is truly a noble idea, evolved out of the brains of Parâsara long ago ...........................................................................
I hope you will be writing to me often.

I remain, Dear Sir,

Yours sincerely,

(Sd) M. Rangacharlu.

---

No. 3. Mr. C. BHASHYAM AIYANGAR, B. A., **Secretary, Srikanchi Kalavati Library, Conjeeveram,** WRITES:—

My dear Sir,

Your Anglo-Vernacular edition of the Great Tamil Alvârs is an undertaking worthy of national support. In each page of the Tamil Prabandha Literature, we find thoughts so pure, so high, so valuable for all purposes of life and after-life, that a lifetime devoted to bring it home to the Tamil-knowing public and the world at large, is time most wisely spent. The task, however, is a stupendous one. If the world can appreciate, enjoy, and realize

the whole of the ennobling spirit pervading the whole of the *Tiruvöymoli* (திருவாய்மொழி)as Tamil scholars can do, who will wish to read any other book than the great *Tiruvöymoli* thereafter ?

Your zeal, your earnestness, and your capacity equal to this great task, make me pray to the Great Giver of all that He will bless you with long life to fully achieve this great object of your life. * * *

It only remains to entreat you to kindly forgive me for the long time I took to send you this short note ; kindly do not think ill of me for the delay.

Be writing to me occasionally.

Yours faithfully,
(Sd.) C. Bhashyam.

CHITTOOR,
*3rd Nov.*, 1898.

---

No. 4. MR. C. MUTTUKUMARASAMY MUDALIYAR, B.A., **Zemindar, Chingleput,** WRITES :—

CHUNAMPET,
23-1-1899.

SIR,

Your letter of the 16th December with Parts I & II of **'Nityanusanhanam'** to hand.

Your attempt by means of Anglo-Tamil editions to bring home to the Tamil-knowing public and the world at large the Visishtâdvaita philosophy contained in the inspired utterances of our Alvârs. is truly patriotic. The exemplary lives and works of these venerable divines (Alvars) are a sealed-book to the outer-world, and your noble endeavour for the first time to place before the thinking world those thoughts so pure, so high, and so valuable as are found in every page of the Prabandha Literature are worthy of national support. Your justification by extracts from different standard works of the so-called 'idolatry' is truly interesting, and I think it will be a sufficient answer to these scurrilous Christian Missionaries who indulge in the whole-sale denouncement of our ancient religion and philosophy. That the 'Archa-forms' (the so-called idolatry) present, in a small compass, the whole vista of universal creation' is too true; and only those who have any devotional instincts in them can perceive its sublimity. While, therefore, congratulating you on the stupendous work you have undertaken to do, and wishing you every success in the attempt, I think you will not consider uncalled for a few remarks from me towards the improvement of the work. They are these :—

(1.) The word-for-word meanings given for the stanzas, should be in prose order to make all clearly understand the text; no doubt a clear paraphrase is given under each stanza, but my suggestion will help to understand the paraphrase better?

(2). There is philosophy in every stanza of the literature under review. That must be explained in simple style. It is only then these sages (Alvârs) will be understood in their true light and even appreciated by Advaitic teachers—such as Swâmi Vivékânanda &c., and by Western *savants*.
* * * The above are my suggestions, and these I give in view to improve the work, and so I hope you will accept them in that spirit in which they are offered, and excuse liberty.

Wishing you success in your undertaking,

I remain,
Sir,
Yours faithfully,

(Sd.) C. MUTTUKUMARASWAMY

---

No. 5. Mr. T. R. VENKATASWAMI NAYUDU, B. A., Assistant to the Inspector-General of Education, Mysore *State*, writes:—

Mysore,
1*st May* 1899.

My Dear Sir,

Accept my best thanks for the numbers of the "Nityânusandhânam Series" that you have kindly presented to me. I need hardly say that every one interested in Vaishnava religious literature is sure to rejoice at your endeavours, not only to bring out a well-got-up edition, but also to introduce such works to all those English-knowing people who cannot easily study purely Vernacular editions. Your undertaking is by no means an easy one; and I am therefore happy to congratulate you upon the numbers already issued. The paraphrase and translation are well done, and misprints are rare; and if the other numbers of the "Series" attain the same degree of excellence, I have no doubt that your books will soon become popular.

I remain,
Dear Sir,
Yours sincerely,

(Sd.) T. R. VENKATASWAMY NAYUDU.

Sriman A. GOVINDACHARLU, Translator of "Bhagavadgita" with SRI RAMANUJABHASHYA, writes:—

Mysore, Vedagriham,
25th May 1899.

My Dear Sir and old School-mate,

That you are doing the most commendable work of bringing home to our countrymen the forgotten treasures of our Dravida Saints' Inspired sayings (viz the "Nityânusandhânam" Series) is a double satisfaction to me, and I have, more than all, reason to doubly congratulate you. Any opinion from any of us is mere mockery before the glory of the Alvârs' work. That itself is a sufficient strength to recommend your work to all.

Your work is moreover opportune, inasmuch as on one side "Advaita" is being preached throughout the world by an organized movement, and on another, Saiva Visishtadvaita is being proclaimed to the prejudice of Vaishnavism and Vedantic Visishtâdvaita.

Apart from these, the main interest of your Translations consists in infusing spirituality among the English-learned who have neglected their own home-language and literature and among ladies and youngsters at home, to whom the easy translations bring the otherwise difficult studies within the reach of their comprehension.

The get-up of the books is all that is desirable. Let me wish you long life and all other things necessary to enable you to cheerfully get through the whole plan of work you have delineated for yourself, and deserve the gratitude of your countrymen and service to the Alvârs and their God.

Yours cordially,
(Sd.) A. GOVINDACHARYA.

# THE NITYÂNUSANDHÂNAM SERIES.

—o—

| No. | Title | | R. | A. |
|---|---|---|---|---|
| 1. | Tiruppallându (తిరుప్పల్లాణ్డు) | ... | 0 | 3 |
| 2. | Do. with English translation | ... | 0 | 4 |
| 3. | Tiruppalliyeluchchi (తిరుప్పళ్ళియెఴుచ్చి) | ... | 0 | 3 |
| 4. | Do. with English translation | ... | 0 | 4 |
| 5. | Tiruppâvai, with Swâpadesârtham (తిరుప్పావై) | ... | 1 | 0 |
| 6. | Do. with English translation | ... | 1 | 8 |
| 7. | Amalanâdipiran (అమలనాదిపిరాన్) | ... | 0 | 2 |
| 8. | Do. with English translation | ... | 0 | 3 |
| 9. | Kanninun Siruttâmbu (కణ్ణినుణ్ శిరుత్తాంబు) | ... | 0 | 2 |
| 10. | Do. with English translation | ... | 0 | 3 |
| 11. | Adhikâra Sangraham (అధికారసఙ్గ్రహమ్) | ... | 1 | 0 |
| 12. | Do. with English translation | ... | 1 | 8 |
| 13. | Kôil Tiruvoymoli (కోయిల్ తిరువాయ్మొఴి) | ... | 1 | 8 |
| 14. | Do. with English translation | ... | 2 | 4 |
| 15. | Râmânuja Nûttandâdi (రామానుజనూత్తన్దాది) | ... | 1 | 8 |
| 16. | Do. with English translation | ... | 2 | 0 |
| 17. | Adaikkalappattu (అడైక్కలప్పత్తు) | ... | 0 | 3 |
| 18. | Do. with English translation | ... | 0 | 4 |
| 19. | Prabandhasâram (ప్రబన్ధసారమ్) | ... | 0 | 7 |
| 20. | Do. with English translation | ... | 0 | 10 |
| 21. | Pillai Andâdi (పిళ్ళైయన్దాది) | ... | 0 | 6 |
| 22. | Do. with English translation | ... | 0 | 10 |
| 23. | Upadésarattinamâlai (ఉపదేశరత్నమాలై) | ... | 0 | 12 |
| 24. | Do. with English translation | ... | 1 | 0 |
| 25. | Tiruvoymoli Nûttandâdi (తిరువాయ్మొఴినూత్తన్దాది) | ... | 1 | 0 |
| 26. | Do. with English translation | ... | 1 | 6 |
| 27. | Tirumâlai (తిరుమాలై) | ... | 0 | 10 |
| 28. | Do. with English translation | ... | 1 | 0 |
| | Visishtâdwaita Bhâskara—English edition (Superior paper) | ... | 3 | 0 |
| | Do. Do. Indian | ... | 1 | 8 |
| | Do. Do. Tamil, Telugu, Kannada, Hindi, each | ... | 0 | 8 |
| | English Translation of Vedantadesikar's Nyâsadasakam | ... | 0 | 8 |
| | The age and writings of the Alvârs. | ... | 0 | 8 |

(Nos. 7–12: In the Press. Nos. 13–28: In Preparation.)

N. B.—A discount of two annas per rupee will be allowed for all payments made in advance for the Parts ordered, excepting the first six.

Copies can be had of :—

M. B. SRINIVASA AIYANGAR, M. A.,

*Translator, Education Department, Mysore.*

*(Formerly Head Master, High School, Kolar.)*